KA / BG - GPO/ 2515 /WPP-47/ 2009 - 2011




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೯ (ಮಾಘ ೨, ಶಕ ವರ್ಷ ೧೯೩೦) | ನಂ. ೩೪ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/9/2009, Bangalore, Camp: Belagavi, Dated : 22nd January, 2009**

The following Bill was introduced in Legislative Assembly on 22.1.2009.

**THE KARNATAKA ESSENTIAL SERVICES MAINTENANCE BILL, 2009**

**(L.A. Bill No. 9 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 9)**

ಕೆಲವು ಅತ್ಯಾವಶ್ಯಕ ಸೇವೆಗಳ ನಿರ್ವಹಣೆಗಾಗಿ ಉಪಬಂಧ ಕಲ್ಪಿಸುವ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಕೆಲವು ಅತ್ಯಾವಶ್ಯಕ ಸೇವೆಗಳ ನಿರ್ವಹಣೆ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ ;

ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು :–

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ** :– (1) ಈ ಅಧಿನಿಯಮವನ್ನು ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು, ಇಡೀ ಕರ್ನಾಟಕ ರಾಜ್ಯಕ್ಕೆ ಅನ್ವಯಿಸತಕ್ಕದ್ದು.

(3) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಹತ್ತು ವರ್ಷಗಳ ಅವಧಿಯವರೆಗೆ ಜಾರಿಯಲ್ಲಿ ಇರತಕ್ಕದ್ದು.

**2. ಪರಿಭಾಷೆಗಳು** .– (1) ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಅತ್ಯಾವಶ್ಯಕ ಸೇವೆ" ಎಂದರೆ,–

(i) ಜಲ ಅಥವಾ ಸಂದರ್ಭಾನುಸಾರವಾಗಿ ವಿದ್ಯುಚ್ಛಕ್ತಿಯ ಉತ್ಪಾದನೆ, ಶೇಖರಣೆ, ಸಾಗಣೆ, ಸರಬರಾಜು ಅಥವಾ ವಿತರಣೆಗೆ ಸಂಬಂಧಪಟ್ಟ ಯಾವುದೇ ಸೇವೆ ;

(ii) ಮೋಟಾರು ವಾಹನಗಳಲ್ಲಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸುವುದಕ್ಕಾಗಿ ಇರುವ ಯಾವುದೇ ಸಾರಿಗೆ ಸೇವೆ.

***ವಿವರಣೆ :–*** ಈ ಖಂಡದ ಉದ್ದೇಶಗಳಿಗಾಗಿ, 'ಮೋಟಾರು ವಾಹನ" ಎಂಬ ಪದಾವಳಿಯು, 1988ರ ಮೋಟಾರು ವಾಹನಗಳ ಅಧಿನಿಯಮದ (1988ರ ಕೇಂದ್ರ ಅಧಿನಿಯಮ 59) 2ನೇ ಪ್ರಕರಣದ (28)ನೇ ಖಂಡದಲ್ಲಿ ಅದಕ್ಕೆ ಕೊಟ್ಟ ಅರ್ಥವನ್ನೇ ಹೊಂದಿರತಕ್ಕದ್ದು.

(iii) ರಾಜ್ಯ ವಿಧಾನಮಂಡಲವು ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಡಿಯಲ್ಲಿ ಯಾವುದರ ಸಂಬಂಧದಲ್ಲಿ ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿದೆಯೋ ಆ ವಿಷಯಕ್ಕೆ ಸಂಬಂಧಿಸಿದಂತಹ ಮತ್ತು ಯಾವುದರಲ್ಲಿ ಕೆಲಸ ಮಾಡಲು ನಿರಾಕರಿಸಿದರೆ, ಯಾವುದೇ ಸಾರ್ವಜನಿಕ ಬಳಕೆ ಸೇವೆಗಳನ್ನು ಅಥವಾ ಸಾರ್ವಜನಿಕರ ಭದ್ರತೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಅಥವಾ ಸಮುದಾಯದ ಜೀವನಕ್ಕೆ ಅವಶ್ಯವಾದ ಸರಬರಾಜುಗಳನ್ನು ಹಾಗೂ ಸೇವೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ತೊಂದರೆ ಉಂಟಾಗುತ್ತದೆ ಅಥವಾ ಸಮುದಾಯವನ್ನು ಬಹಳ ಕಷ್ಟಕ್ಕೆ ಈಡು ಮಾಡುತ್ತದೆ ಎಂದು ಸರ್ಕಾರವು ಅಭಿಪ್ರಾಯಪಡುತ್ತದೋ ಅಂಥ ಯಾವುದೇ ಇತರ ಸೇವೆ ಅಥವಾ ಉದ್ಯೋಗ ಅಥವಾ ಅವುಗಳ ಯಾವುದೇ ಒಂದು ವರ್ಗವನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಅತ್ಯಾವಶ್ಯಕ ಸೇವೆ ಎಂದು ಅಧಿಸೂಚನೆಯ ಮೂಲಕ ಘೋಷಿಸಬಹುದು.

(ಬಿ) "ಸರ್ಕಾರ" ಎಂದರೆ ರಾಜ್ಯ ಸರ್ಕಾರ ;

(ಸಿ) ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ "ಕೆಲಸ ಮಾಡಲು ನಿರಾಕರಿಸುವುದು" ಎಂದರೆ, ಸಂಬಂಧಪಡುವ ಸೇವಾ ನಿಬಂಧನೆಗಳು ಮತ್ತು ಷರತ್ತುಗಳ ಅಡಿಯಲ್ಲಿ ಅನುಮತಿಯನ್ನು ನೀಡಲು ಸಕ್ಷಮವಾದ ಪ್ರಾಧಿಕಾರಿಯಿಂದ ಅನುಮತಿಯನ್ನು ಪಡೆದುಕೊಳ್ಳದೇ, ಯಾವುದೇ ಕೆಲಸದ ದಿನದಂದು ಅಥವಾ ಯಾವುದೇ ಕೆಲಸದ ವೇಳೆಯಲ್ಲಿ ಕೆಲಸದ ಸ್ಥಳಕ್ಕೆ ಅವನು ಅಥವಾ ಅವರು ಹಾಜರಾಗಲು ತಪ್ಪುವುದು ಅಥವಾ ಗೈರು ಹಾಜರಾಗಿರುವುದು ಅಥವಾ ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ, ಯಾವುದೇ ಕೆಲಸದ ದಿನದಲ್ಲಿ ಅಥವಾ ಕೆಲಸದ ವೇಳೆಯಲ್ಲಿ ಕೆಲಸ ಮಾಡಲು ನಿರಾಕರಿಸುವುದು ಅಥವಾ ಕೆಲಸ ಮಾಡಲು ಒಪ್ಪದಿರುವುದು ಅಥವಾ ಕೆಲಸದ ನಿಲುಗಡೆಗೆ ಅಥವಾ ಕೆಲಸವು ಸಾಕಷ್ಟು ವಿಳಂಬಗತಿಯಲ್ಲಿ ನಡೆಯುವಂತೆ ಪರಿಣಾಮ ಬೀರುವ ಅಥವಾ ಪರಿಣಾಮ ಬೀರುವ ಸಂಭವವಿರುವಂಥ ಅವನ ಅಥವಾ ಅವರ ಯಾವುದೇ ಇತರ ವರ್ತನೆ ಮತ್ತು "ಕೆಲಸ ಮಾಡಲು ನಿರಾಕರಿಸುವುದು" ಎಂಬ ಪದಗಳನ್ನು ವ್ಯಾಕರಣ ವ್ಯತ್ಯಾಸಗಳು ಮತ್ತು ಸಂವಾದಿ ಪದಾವಳಿಗಳೊಂದಿಗೆ ತದನುಸಾರವಾಗಿ ಅರ್ಥೈಸತಕ್ಕದ್ದು.

(2) (ಎ) (1)ನೇ ಉಪ–ಪ್ರಕರಣದ (ಎ) ಖಂಡದ (iii)ನೇ ಉಪ–ಖಂಡದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿದ್ದರೆ ಅದನ್ನು ಹೊರಡಿಸಿದ ತರುವಾಯದ ಒಂದು ವಾರದೊಳಗಾಗಿ ಮತ್ತು ಅದು ಅಧಿವೇಶನದಲ್ಲಿಲ್ಲದಿದ್ದರೆ ಸದನಗಳ ಮುಂದಿನ ಅಧಿವೇಶನ ಪ್ರಾರಂಭವಾದ ತರುವಾಯದ ಒಂದು ವಾರದೊಳಗಾಗಿ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ದಿನಾಂಕದಿಂದ ಅಥವಾ ಸಂದರ್ಭಾನುಸಾರ ರಾಜ್ಯ ವಿಧಾನಮಂಡಲದ ಮರು ಅಧಿವೇಶನದಿಂದ ಅರವತ್ತು ದಿನಗಳು ಮುಕ್ತಾಯವಾದ ತರುವಾಯ, ಆ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚಿತವಾಗಿ ಅಧಿಸೂಚನೆಯನ್ನು ಹೊರಡಿಸಿದುದನ್ನು ಅನುಮೋದಿಸಿ ಒಂದು ನಿರ್ಣಯವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಂಗೀಕರಿಸಿದ ಹೊರತು, ಅದು ಕಾರ್ಯಾಚರಣೆಯಲ್ಲಿರುವುದು ನಿಂತುಹೋಗತಕ್ಕದ್ದು.

(ಬಿ) ಯಾವುದೇ ಅಧಿಸೂಚನೆಯು ಕಾರ್ಯಾಚರಣೆಯಲ್ಲಿರುವುದು ಈ ಉಪಪ್ರಕರಣದ ಮೂಲಕ ಅಥವಾ ಅದರಡಿಯಲ್ಲಿ ನಿಂತು ಹೋದರೆ, ಹಾಗೆ ನಿಂತು ಹೋಗುವುದಕ್ಕೆ ಮುಂಚೆ ಮಾಡಿದ ಅಥವಾ ಮಾಡುವುದನ್ನು ಬಿಟ್ಟುಬಿಡಲಾದ ಯಾವುದೇ ಕೃತ್ಯಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

ವಿವರಣೆ :– ರಾಜ್ಯ ವಿಧಾನಮಂಡಲದ ಉಭಯ ಸದನಗಳನ್ನು ಬೇರೆ ಬೇರೆ ದಿನಾಂಕಗಳಂದು ಮತ್ತೆ ಸಭೆ ಸೇರುವಂತೆ ಕರೆಯಲಾಗಿದ್ದರೆ ಆ ಅರವತ್ತು ದಿನಗಳ ಅವಧಿಯನ್ನು ಈ ದಿನಾಂಕಗಳಲ್ಲಿ ನಂತರದ ದಿನಾಂಕದಿಂದ ಲೆಕ್ಕ ಹಾಕತಕ್ಕದ್ದು.

**3. ಕೆಲವು ಅತ್ಯಾವಶ್ಯಕ ಸೇವೆಗಳಲ್ಲಿ ಕೆಲಸ ಮಾಡಲು ನಿರಾಕರಿಸುವುದನ್ನು ನಿಷೇಧಿಸಲು ಅಧಿಕಾರ.–** (1) ಸಾರ್ವಜನಿಕ ಹಿತಾಸಕ್ತಿಯ ಅಥವಾ ಸಾರ್ವಜನಿಕ ಸುವ್ಯವಸ್ಥೆಯ ದೃಷ್ಟಿಯಿಂದ ನಿರ್ದಿಷ್ಟಪಡಿಸ ಬಹುದಾದಂಥ ಅತ್ಯಾವಶ್ಯಕ ಸೇವೆಗಳಲ್ಲಿ ಕೆಲಸ ಮಾಡಲು ನಿರಾಕರಿಸುವುದನ್ನು ನಿಷೇಧಿಸುವುದು ಅವಶ್ಯವೆಂದು ಅಥವಾ ಯುಕ್ತವೆಂದು ಸರ್ಕಾರಕ್ಕೆ ಮನದಟ್ಟಾದರೆ, ಅದು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಮತ್ತು ಆದೇಶದಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ದಿನಾಂಕದಿಂದ ಹಾಗೆ ನಿಷೇಧಿಸಬಹುದು.

(2) (1)ನೇ ಉಪ–ಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶವನ್ನು, ಆದೇಶದಿಂದ ಬಾಧಿತ ವ್ಯಕ್ತಿಗಳ ಗಮನಕ್ಕೆ ತರಲು ಸರ್ಕಾರವು, ತಾನು ಅತ್ಯಂತ ಅತಿ ಸೂಕ್ತವೆಂದು ಪರಿಗಣಿಸುವ ರೀತಿಯಲ್ಲಿ ಪ್ರಕಟಿಸತಕ್ಕದ್ದು.

(3) (1)ನೇ ಉಪ–ಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶವು ಅದು ಕಾರ್ಯಾಚರಣೆಯಲ್ಲಿ ಬರುವ ದಿನಾಂಕದಿಂದ ಒಂದು ವರ್ಷ ಮಾತ್ರ ಜಾರಿಯಲ್ಲಿರತಕ್ಕದ್ದು, ಆದರೆ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ಅಥವಾ ಸಾರ್ವಜನಿಕ ಸುವ್ಯವಸ್ಥೆಯ ದೃಷ್ಟಿಯಿಂದ ಆರು ತಿಂಗಳಿಗೆ ಮೀರದ ಯಾವುದೇ ಅವಧಿಗೆ ಅದನ್ನು ವಿಸ್ತರಿಸುವುದು ಅಗತ್ಯ ಅಥವಾ ಯುಕ್ತವೆಂದು ಭಾವಿಸಿದರೆ ಅದೇ ಬಗೆಯ ಆದೇಶದ ಮೂಲಕ ಅದೇ ರೀತಿಯಲ್ಲಿ ಪ್ರಕಟಿಸಿ ಹಾಗೆ ಮಾಡಬಹುದು.

(4) (1)ನೇ ಉಪ–ಪ್ರಕರಣದಡಿಯಲ್ಲಿ ಒಂದು ಆದೇಶವನ್ನು ಹೊರಡಿಸಿದ ನಂತರ,–

(ಎ) ಆದೇಶವು ಸಂಬಂಧಪಡುವ ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ನಿಯೋಜಿತನಾದ ಯಾವೊಬ್ಬ ವ್ಯಕ್ತಿಯು ಕೆಲಸ ಮಾಡಲು ನಿರಾಕರಿಸತಕ್ಕದ್ದಲ್ಲ ಅಥವಾ ಕೆಲಸ ಮಾಡಲು ನಿರಾಕರಿಸುವುದನ್ನು ಮುಂದುವರಿಸತಕ್ಕದ್ದಲ್ಲ.

(ಬಿ) ಯಾವುದೇ ಅಂಥ ಸೇವೆಯಲ್ಲಿ ನಿಯೋಜಿತನಾಗಿರುವ ಯಾವೊಬ್ಬ ವ್ಯಕ್ತಿಯು, ಆದೇಶವನ್ನು ಹೊರಡಿಸಲಾದ ದಿನಾಂಕಕ್ಕೆ ಮೊದಲು ಅಥವಾ ತರುವಾಯ ಕೆಲಸ ಮಾಡಲು ನಿರಾಕರಿಸಿರುವುದಾಗಿ ಘೋಷಿಸುವುದು ಅಥವಾ ನಿರಾಕರಣೆಯನ್ನು ಆರಂಭಿಸುವುದು ಅಥವಾ ಮುಂದುವರಿಸುವುದು ಕಾನೂನು ಬಾಹಿರವಾಗಿರತಕ್ಕದ್ದು.

(5) (1)ನೇ ಉಪ–ಪ್ರಕರಣ ಅಥವಾ (3) ನೇ ಉಪ–ಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ಆದೇಶವನ್ನು, ಯಾವುದೇ ಸಮಯದಲ್ಲಿ, ಸರ್ಕಾರವು ಅದೇ ಬಗೆಯ ಆದೇಶದ ಮೂಲಕ ಹಿಂತೆಗೆದುಕೊಳ್ಳಬಹುದು. ಆದರೆ, ಹಾಗೆ ಹಿಂತೆಗೆದುಕೊಂಡದ್ದರಿಂದ, ಅಂಥ ಆದೇಶದ ಹಿಂದಿನ ಕಾರ್ಯಾಚರಣೆಗೆ ಅಥವಾ ಅದರಡಿಯಲ್ಲಿ ಕ್ರಮಬದ್ಧವಾಗಿ ಮಾಡಲಾದ ಅಥವಾ ಮಾಡಲು ಎಡೆಗೊಟ್ಟ ಯಾವುದೇ ಕೃತ್ಯಕ್ಕೆ ಮತ್ತು ಪ್ರಾಪ್ತವಾದ ಅಥವಾ ಗುರಿಯಾದ ಯಾವುದೇ, ಬಾಧ್ಯ ಅಥವಾ ಹೊಣೆಗಾರಿಕೆಗೆ ಪರಿಣಾಮ ಬೀರತಕ್ಕದ್ದಲ್ಲ ಅಥವಾ ಹಾಗೆ ಹಿಂತೆಗೆದುಕೊಂಡುದುದಕ್ಕೆ ಮುಂಚೆ ಈ ಅಧಿನಿಯಮಕ್ಕೆ ವಿರುದ್ಧವಾಗಿ ಮಾಡಲಾಗಿದ್ದ ಯಾವುದೇ ಅಪರಾಧಕ್ಕೆ ಸಂಬಂಧಪಟ್ಟಂತೆ ಗುರಿಯಾದ ಯಾವುದೇ ದಂಡ ಅಥವಾ ಶಿಕ್ಷೆಗೆ ಭಾದಕವಾಗತಕ್ಕದ್ದಲ್ಲ.

**4. ಕೆಲಸ ಮಾಡಲು ಮಾಡುವ ಕಾನೂನುಬಾಹಿರ ನಿರಾಕರಣೆಗೆ ದಂಡ.–** ಯಾವೊಬ್ಬ ವ್ಯಕ್ತಿಯು, ಯಥೋಚಿತ ಕಾರಣವಿಲ್ಲದೆ, ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ಕೆಲಸ ಮಾಡಲು ನಿರಾಕರಿಸಿದರೆ ಅಥವಾ ನಿರಾಕರಿಸುವುದನ್ನು ಮುಂದುವರಿಸಿದರೆ, ಅಂಥ ನಿರಾಕರಣೆಯು ಈ ಅಧಿನಿಯಮದ ಅಡಿಯಲ್ಲಿ ಕಾನೂನು ಬಾಹಿರವಾಗುವುದರಿಂದ ಅವನು, ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**5. ಪ್ರಚೋದನೆ ಇತ್ಯಾದಿಗೆ ದಂಡ.–** ಯಾವೊಬ್ಬ ವ್ಯಕ್ತಿಯು, ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ಕೆಲಸ ಮಾಡಲು ನಿರಾಕರಿಸೆಂದು ಯಾವೊಬ್ಬ ಇತರ ವ್ಯಕ್ತಿಯನ್ನು ಪ್ರಚೋದಿಸಿದರೆ ಅಥವಾ ಪ್ರೇರೇಪಿಸಿದರೆ ಅಥವಾ ಇತರ ರೀತಿಯಿಂದ ನಿರಾಕರಿಸುವುದನ್ನು ಮುಂದುವರಿಸುವುದಕ್ಕೆ ಪ್ರೋತ್ಸಾಹಕರವಾಗಿ ವರ್ತಿಸಿದರೆ, ಹಾಗೆ ನಿರಾಕರಿಸುವುದು ಈ ಅಧಿನಿಯಮದ ಅಡಿಯಲ್ಲಿ ಕಾನೂನು ಬಾಹಿರವಾಗುವುದರಿಂದ ಅವನು, ಅಪರಾಧ ನಿರ್ಣಯವಾದ ಮೇಲೆ ಒಂದು ವರ್ಷದ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**6. ಕೆಲಸ ಮಾಡಲು ಕಾನೂನು ಬಾಹಿರ ನಿರಾಕರಣೆಗೆ ಹಣಕಾಸು ನೆರವು ನೀಡಿದ್ದಕ್ಕಾಗಿ ದಂಡ.–** ಯಾವುದೇ ಅತ್ಯಾವಶ್ಯಕ ಸೇವೆಗಳಲ್ಲಿ ಕೆಲಸ ಮಾಡಲು ನಿರಾಕರಿಸುವುದಕ್ಕೆ ಪ್ರೋತ್ಸಾಹಕರವಾಗಿ ಅಥವಾ ಅದಕ್ಕೆ ಬೆಂಬಲ ನೀಡಲು ಯಾವೊಬ್ಬ ವ್ಯಕ್ತಿಯು, ತಿಳಿದೂ ತಿಳಿದೂ ಯಾವುದೇ ಹಣ ವೆಚ್ಚ ಮಾಡಿದಲ್ಲಿ ಅಥವಾ ಸರಬರಾಜು ಮಾಡಿದಲ್ಲಿ ಅಂಥ ನಿರಾಕರಣೆಯು ಈ ಅಧಿನಿಯಮದ ಅಡಿಯಲ್ಲಿ ಕಾನೂನು ಬಾಹಿರವಾಗಿರುವ ಕಾರಣ ಅಪರಾಧ ನಿರ್ಣಯವಾದ ಮೇಲೆ ಅಂಥ ಕೃತ್ಯಕ್ಕಾಗಿ ಒಂದು

ವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**7. ಇತರ ಶಿಸ್ತು ಕ್ರಮಗಳ ಜೊತೆಗೆ 4,5 ಅಥವಾ 6ನೇ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳುವುದು.–** 4,5 ಅಥವಾ 6ನೇ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ಕೈಗೊಳ್ಳಲಾದ ಯಾವುದೇ ಕ್ರಮವು ಅವನ ಸೇವಾ ಅಥವಾ ಉದ್ಯೋಗದ ನಿಬಂಧನೆಗಳು ಮತ್ತು ಷರತ್ತುಗಳ ಮೂಲಕ ಅಥವಾ ಅದರ ಅಡಿಯಲ್ಲಿನ ಮತ್ತು ಅವನು ಯಾವುದಕ್ಕೆ ಬದ್ಧನಾಗಬಹುದೋ ಅಂಥ ಶಿಸ್ತು ಸ್ವರೂಪದ ಯಾವುದೇ ಇತರ ಕ್ರಮವನ್ನು ಅಥವಾ ಮುಂದೆ ಉಂಟಾಗಬಹುದಾದ ಯಾವುದೇ ಪರಿಣಾಮವನ್ನು ಬಾಧಿಸತಕ್ಕದ್ದಲ್ಲ ಮತ್ತು ಅದು ಅದಕ್ಕೆ ಹೆಚ್ಚುವರಿಯಾಗತಕ್ಕದ್ದು.

**8. ವಾರಂಟಿಲ್ಲದೆ ದಸ್ತಗಿರಿ ಮಾಡಲು ಅಧಿಕಾರ.–** 1973 ರ ದಂಡ ಪ್ರಕ್ರಿಯಾ ಸಂಹಿತೆಯಲ್ಲಿ (1947ರ ಕೇಂದ್ರ ಅಧಿನಿಯಮ ಸಂಖ್ಯೆ 2) ಏನೇ ಇದ್ದರೂ, ಯಾವೊಬ್ಬ ಪೊಲೀಸ್ ಅಧಿಕಾರಿಯು ಯಾವೊಬ್ಬ ವ್ಯಕ್ತಿಯು ಈ ಅಧಿನಿಯಮದ ವಿರುದ್ಧ ಯಾವುದೇ ಅಪರಾಧ ಮಾಡಿರುವನೆಂದು ಸಕಾರಣವಾಗಿ ಸಂಶಯಪಟ್ಟಲ್ಲಿ ಅವನನ್ನು ವಾರಂಟಿಲ್ಲದೆ ದಸ್ತಗಿರಿ ಮಾಡಬಹುದು.

**9. ಅಧಿನಿಯಮವು ಇತರ ಕಾನೂನುಗಳ ಮೇಲೆ ಹೆಚ್ಚಿನ ಪರಿಣಾಮ ಹೊಂದಿರುವುದು.–** ಈ ಅಧಿನಿಯಮದ ಉಪಬಂಧಗಳು ಮತ್ತು ಅದರ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶವು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅದಕ್ಕೆ ಅಸಂಗತವಾಗಿರುವ ಯಾವುದೇ ವಿಷಯವನ್ನು ಒಳಗೊಂಡಿದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಜಲ ಅಥವಾ ವಿದ್ಯುಚ್ಛಕ್ತಿಗೆ ಸಂಬಂಧಪಟ್ಟಂತೆ ಉತ್ಪಾದನೆ, ಶೇಖರಣೆ, ಸಾಗಣೆ, ಪೂರೈಕೆ ಅಥವಾ ವಿತರಣೆಗೆ ಸಂಬಂಧಿಸಿದಂತೆ ಹಾಗೂ ಮೋಟಾರು ವಾಹನಗಳಲ್ಲಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸುವುದಕ್ಕಾಗಿ ಇರುವ ಸಾರಿಗೆ ಸೇವೆಗೆ ಸಂಬಂಧಿಸಿದಂತೆ ಮತ್ತು ರಾಜ್ಯ ವಿಧಾನ ಮಂಡಲವು ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿರುವಂಥ ಯಾವುದೇ ಇತರ ಸೇವೆ ಅಥವಾ ಉದ್ಯೋಗ ಅಥವಾ ಅದರ ವರ್ಗಕ್ಕೆ ಸಂಬಂಧಿಸಿದಂತೆ ಕೆಲವು ಅತ್ಯಾವಶ್ಯಕ ಸೇವೆಗಳಲ್ಲಿ ಕೆಲಸ ಮಾಡುವುದನ್ನು ನಿರಾಕರಿಸುವುದನ್ನು ನಿಷೇಧಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ತಿದ್ದುಪಡಿಯಿಂದಾಗಿ ಯಾವುದೇ ಆರ್ಥಿಕ ಪರಿಣಾಮ ಉಂಟಾಗುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರಕ್ಕೆ ಸಂಬಂಧಿಸಿದ ಜ್ಞಾಪನಪತ್ರ

**ಖಂಡ 2:** 2ನೇ ಖಂಡದ (1)ನೇ ಉಪಖಂಡದ (ಎ) ಬಾಬಿನ (iii)ನೇ ಉಪಬಾಬು, ಈ ಅಧಿನಿಯಮದ ಉದ್ದೇಶಕ್ಕಾಗಿ ಯಾವ ಯಾವ ಸೇವೆಗಳು ಅತ್ಯಾವಶ್ಯಕ ಸೇವೆಗಳೆಂದು ಅಧಿಸೂಚನೆಯ ಮೂಲಕ ಘೋಷಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 3:** 3ನೇ ಖಂಡದ (1)ನೇ ಉಪಖಂಡವು, ಸೇವೆಗಳನ್ನು ಅತ್ಯಾವಶ್ಯಕವೆಂದು ನಿರ್ದಿಷ್ಟಪಡಿಸಲು ಮತ್ತು ಅವುಗಳಲ್ಲಿ ಕೆಲಸ ಮಾಡಲು ಯಾವ ದಿನಾಂಕದಿಂದ ನಿರಾಕರಿಸಕೂಡದೆಂದು ನಿರ್ದಿಷ್ಟಪಡಿಸಿ ಆದೇಶದಲ್ಲಿ ನಿಷೇಧಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರತ್ಯಾಯೋಜಿತ ಶಾಸನ ರಚನಾಧಿಕಾರವು ವಾಡಿಕೆಯ ಸ್ವರೂಪದ್ದಾಗಿದೆ.

**ವಿ.ಎಸ್. ಆಚಾರ್ಯ**
ಗೃಹ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE KARNATAKA ESSENTIAL SERVICES MAINTENANCE BILL, 2009**

**(L.A. Bill No. 9 of 2009)**

A Bill to provide for the maintenance of certain essential services.

Whereas it is expedient to provide for the maintenance of certain essential services and for matters connected therewith for the purposes hereinafter appearing;

Be it enacted by the Karnataka State Legislature in the fifty-ninth year of the Republic of India, as follows :-

**1. Short title, extent and commencement .-** (1) This Act may be called the Karnataka Essential Services Maintenance Act, 2009.

(2) It extends to the whole of the State of Karnataka.

(3) It shall come into force at once, and remain in force for a period of ten years.

**2. Definitions .-** (1) In this Act, unless the context otherwise requires,-

(a) "essential service" means,-

(i) any service connected with production, generation, storage, transmission, supply or distribution, as the case may be, of water or electricity;

(ii) any transport service for the carriage of passengers or goods by motor vehicles.

***Explanation*** .- For the purpose of this clause, the expression "motor vehicle" shall have the meaning assigned to it in clause (28) of section 2 of the Motor Vehicles Act, 1988 (Central Act 59 of 1988).

(iii) any other service or employment or class thereof connected with any matter with respect to which the State Legislature has power to make laws under List II of the Seventh Schedule to the Constitution and which the Government being of the opinion that refusal to work therein would prejudicially affect the maintenance of any public utility services or the public safety or the maintenance of supplies and service necessary for the life of the community or would result in the infliction of grave hardship on the community, may, by notification, declare to be an essential service for the purpose of this Act;

(b) "Government" means, the State Government;

(c) "refusal to work" in relation to any person or persons, means his or their failure to attend at, or absence from the place of work on any working day or during any working hour, without obtaining permission therefor of the authority competent to grant such permission under the relevant terms and conditions of service or his or their refusal to work or to accept work during any working day or working hour or any other conduct on his or their part which results in or is likely to result in cessation or substantial retardation of work, in any essential service, and the words "refuse to work" with all their grammatical variations and cognate expressions shall be construed accordingly.

(2) (a) Every notification issued under sub-clause (iii) of clause (a) of sub-section (1) shall be laid before each House of the State Legislature within a week after it is made, if the House is in session, and within a week after the commencement of the next session of the House, if it is not in session and shall cease to operate at the expiration of sixty days from the date of its being so laid or from the re-assembly of the State Legislature as the case may be, unless before the expiration of that period a resolution approving the issue of the notification is passed by both Houses of the State Legislature;

(b) Where any notification ceases to operate by or under this sub-section, the ceaser shall be without prejudice to anything done or omitted to be done before such ceaser.

***Explanation*** .- Where the two Houses of the State Legislature are summoned to re-assemble on different dates the period of sixty days shall be reckoned from the latter of these dates.

**3. Power to prohibit refusal to work in certain essential services.-** (1) If the Government are satisfied that in the public interest or in the interest of the public order, it is necessary or expedient so to do, they may, by general or special order, prohibit refusal to work in such essential services and from such date as may be specified in the order.

(2) An order made under sub-section (1) shall be published in such manner as the Government consider best calculated to bring it to the notice of the persons affected by the order.

(3) An order made under sub-section (1) shall be in force for one year only from the date it comes into operation, but the Government may, by a like order, published in the like manner, extend it for any period not exceeding six months, if they are satisfied that in the public interest or in the interest of the public order it is necessary or expedient so to do.

(4) Upon the issue of an order under sub-section (1) ,-

(a) no person employed in any essential service to which the order relates shall refuse to work or continue to refuse to work;

(b) any refusal to work declared or begun or continued, whether before or after the issue of the order, by any person employed in any such service, shall be illegal.

(5) Any order made under sub-section (1) or sub-section (3) may, at any time, be rescinded by the Government by a like order, but such rescission shall not affect the previous operation of such order or anything duly done or suffered thereunder, and shall not affect any obligation or liability accrued or incurred or any penalty or punishment incurred in respect of any offence committed against this Act before such rescission.

**4. Penalty for illegal refusal to work .-** Any person who, without reasonable excuse, refuses or continues to refuse to work in any essential service, such refusal being illegal under this Act shall on conviction, be punished with imprisonment for a term which may extend to one year or with fine which may extend to two thousand rupees or with both.

**5. Penalty for instigation, etc. .-** Any person who instigates, or incites any other person to take part in, or otherwise acts in furtherance of refusal to work in any essential service, such refusal being illegal under this Act shall, on conviction, be punished with imprisonment for a term which may extend to one year or with fine which may extend to two thousand rupees or with both.

**6. Penalty for giving financial aid to illegal refusal to work .-** Any person who knowingly expends or supplies any money in furtherance or support of refusal to work in any essential service such refusal being illegal under this Act shall, on conviction, be punished with imprisonment for a term which may extend to one year or with fine which may extend to two thousand rupees, or with both.

**7. Action under sections 4, 5 or 6 in addition to other disciplinary action .-** Any action taken against any person under sections 4, 5 or 6 shall not affect and shall, be in addition to, any other action of a disciplinary nature or any consequence which may ensue, and to which the person may be liable by or under the terms and conditions of his service or employment.

**8. Power to arrest without warrant.-** Notwithstanding anything contained in the Code of Criminal Procedure, 1973 (Central Act 2 of 1974), any police officer may arrest without warrant any person who is reasonably suspected of having committed any offence against this Act.

**9. Act to over-ride other laws.-** The provisions of this Act and or any order issued thereunder shall have effect notwithstanding anything inconsistent therewith contained in any other law for the time being in force.

## STATEMENT OF OBJECTS AND REASONS

It is considered necessary to prohibit refusal to work in certain essential services connected with production, generation, storage, transmission, supply or distribution of water or electricity, transport service for the carriage of passengers or goods by motor vehicles and any other service or employment or class thereof with respect to which the State Legislature has power to make laws.

Hence the Bill.

## FINANCIAL MEMORANDUM

The proposed measure does not involve any financial implication.

**MEMORANDUM REGARDING DELEGATED LEGISLATION**

**Clause 2.**- Sub-item (iii) of item (a) of sub-clause (1) of clause 2 empowers the State Government to declare by notification such of the services to be the essential services for the purposes of this Act

**Clause 3.**- Sub-clause (1) of Clause 3 empowers the State Government to specify the essential service and to specify the date from which refusal to work therein, is prohibited in the order.

The proposed delegation of Legislative power is of a normal character.

**V.S. ACHARYA**
Minister for Home

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೯ (ಮಾಘ ೨, ಶಕ ವರ್ಷ ೧೯೩೦) | ನಂ. ೩೫ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/11/2009, Bangalore, Camp: Belagavi, Dated : 22nd January, 2009**

The following Bill was introduced in Legislative Assembly on 22.1.2009.

**THE KARNATAKA GOVERNMENT PARKS (PRESERVATION) (AMENDMENT) BILL, 2009**

**(L.A. Bill No. 11 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಎರಡನೇ ಅಧಿವೇಶನ**

**ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 11)**

ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ನ್ನು (1975ರ ಕರ್ನಾಟಕ ಅಧಿನಿಯಮ 23) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ** .– (1) ಈ ಅಧಿನಿಯಮವನ್ನು ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು 2008ರ ನವೆಂಬರ್ 22ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಹೊಸ 5ನೇ ಪ್ರಕರಣದ ಸೇರ್ಪಡೆ.**– ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ 1975ರ (1975ರ ಕರ್ನಾಟಕ ಅಧಿನಿಯಮ 23) 4ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

**"5 ಕೆಲವೊಂದು ಪ್ರಕರಣಗಳಲ್ಲಿ ಅನುಮತಿ.–** 4ನೇ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು ನಿರ್ಮಾಣ, ನಿರ್ವಹಣೆ, ವ್ಯವಸ್ಥಾಪನೆ, ಬಳಕೆ ಮತ್ತು ಅಂತಹುದೇ ಇತರ ಉದ್ದೇಶಗಳ ಸಂಬಂಧದಲ್ಲಿ ತಾನು ವಿಧಿಸಬಹುದಾದಂಥ ಷರತ್ತುಗಳು ಮತ್ತು ನಿಬಂಧನೆಗಳಿಗೆ ಒಳಪಟ್ಟು.–

(ಎ) ಇಂದಿರಾ ಗಾಂಧಿ ಸಂಗೀತ ಕಾರಂಜಿ ಉದ್ಯಾನವನದಲ್ಲಿ 1223 ಚದರ ಮೀಟರುಗಳನ್ನು ರಸ್ತೆಗಳ ಅಗಲೀಕರಣದ ಉದ್ದೇಶಕ್ಕಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ, ಮತ್ತು

(ಬಿ) ಲಾಲ್‌ಬಾಗ್ ಉದ್ಯಾನವನದ ಪಶ್ಚಿಮ ದ್ವಾರದ, ಪಶ್ಚಿಮ ಭಾಗದ ಕಡೆಗಿನ (ಪ್ರಸ್ತುತ ಆರ್.ವಿ. ರಸ್ತೆ ಎಂದು ಕರೆಯಲಾಗುತ್ತಿರುವ) ಕಾಂಪೌಂಡು ಗೋಡೆಯ ಉದ್ದಕ್ಕೂ 1135.18 ಚದರ ಮೀಟರುಗಳನ್ನು ಬೆಂಗಳೂರು ಮೆಟ್ರೋ ರೈಲು ಕಾರ್ಪೋರೇಷನ್ ಲಿಮಿಟೆಡ್‌ಗೆ ಬೆಂಗಳೂರಿನ ಮೆಟ್ರೊ ರೈಲು ಯೋಜನೆಯಲ್ಲಿ ಮೇಲು ನಿಲ್ದಾಣವನ್ನು ನಿರ್ಮಿಸುವ ಉದ್ದೇಶಕ್ಕಾಗಿ,

– ಪರಭಾರೆ ಮಾಡಬಹುದು."

**3. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ಅಧ್ಯಾದೇಶ, 2008ನ್ನು (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ: 4) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದಿಂದ ಒಂದಿಷ್ಟು ಪ್ರದೇಶವನ್ನು ಬೆಂಗಳೂರು ಮಹಾನಗರ ಪಾಲಿಕೆಗೆ ಮತ್ತು ಲಾಲ್‌ಬಾಗಿಗೆ ಸೇರಿದ ಒಂದಿಷ್ಟು ಪ್ರದೇಶವನ್ನು ಬೆಂಗಳೂರು ಮೆಟ್ರೊ ರೈಲು ಕಾರ್ಪೊರೇಶನ್ ಲಿಮಿಟೆಡ್‌ಗೆ ಈ ಕೆಳಕಂಡ ಉದ್ದೇಶಗಳಿಗಾಗಿ ಎಂದರೆ:–

(i) ಬೃಹತ್ ಮಹಾನಗರ ಪಾಲಿಕೆಗೆ ರಸ್ತೆ ಅಗಲೀಕರಣಕ್ಕಾಗಿ ಮತ್ತು

(ii) ಬೆಂಗಳೂರು ಮೆಟ್ರೋ ರೈಲು ಯೋಜನೆಗೆ ಮೇಲು ನಿಲ್ದಾಣವನ್ನು ನಿರ್ಮಿಸುವುದಕ್ಕಾಗಿ.

ಪರಭಾರೆ ಮಾಡುವುದಕ್ಕೆ ಉಪಬಂಧವನ್ನು ಕಲ್ಪಿಸಿ ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975 ಕ್ಕೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ವಿಷಯವು ತುರ್ತು ಸ್ವರೂಪದ್ದಾಗಿರುವುದರಿಂದ ಮತ್ತು ವಿಧಾನ ಮಂಡಳದ ಎರಡೂ ಸದನಗಳು ಅಧಿವೇಶನದಲ್ಲಿಲ್ಲದ್ದಿದ್ದುದರಿಂದ ಕರ್ನಾಟಕದ ರಾಜ್ಯಪಾಲರು ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ಅಧ್ಯಾದೇಶ 2008 ಅನ್ನು (2008 ರ ಕರ್ನಾಟಕ ಅಧ್ಯಾದೇಶ 4) ಪ್ರಖ್ಯಾಪಿಸಿರುತ್ತಾರೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗುತ್ತಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮದಿಂದ ಯಾವ ಹೆಚ್ಚುವರಿ ವೆಚ್ಚವು ಉಂಟಾಗುವುದಿಲ್ಲ.

## ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಗಳ ನಿಯಮಗಳ 80ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ.

ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದಿಂದ ಒಂದಿಷ್ಟು ಪ್ರದೇಶವನ್ನು ಬೆಂಗಳೂರು ಮಹಾನಗರ ಪಾಲಿಕೆಗೆ ಮತ್ತು ಲಾಲ್‌ಬಾಗಿಗೆ ಸೇರಿದ ಒಂದಿಷ್ಟು ಪ್ರದೇಶವನ್ನು ಬೆಂಗಳೂರು ಮೆಟ್ರೊ ರೈಲು ಕಾರ್ಪೊರೇಶನ್ ಲಿಮಿಟೆಡ್‌ಗೆ ಈ ಕೆಳಕಂಡ ಉದ್ದೇಶಗಳಿಗಾಗಿ ಎಂದರೆ:–

(i) ಬೃಹತ್ ಮಹಾನಗರ ಪಾಲಿಕೆಗೆ ರಸ್ತೆ ಅಗಲೀಕರಣಕ್ಕಾಗಿ ಮತ್ತು

(ii) ಬೆಂಗಳೂರು ಮೆಟ್ರೋ ರೈಲು ಯೋಜನೆಗೆ ಮೇಲು ನಿಲ್ದಾಣವನ್ನು ನಿರ್ಮಿಸುವುದಕ್ಕಾಗಿ.

ಪರಭಾರೆ ಮಾಡುವುದಕ್ಕೆ ಉಪಬಂಧವನ್ನು ಕಲ್ಪಿಸಿ ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975 ಕ್ಕೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ವಿಷಯವು ತುರ್ತು ಸ್ವರೂಪದ್ದಾಗಿರುವುದರಿಂದ ಮತ್ತು ವಿಧಾನ ಮಂಡಳದ ಎರಡೂ ಸದನಗಳು ಅಧಿವೇಶನದಲ್ಲಿಲ್ಲದ್ದಿದ್ದುದರಿಂದ ಕರ್ನಾಟಕದ ರಾಜ್ಯಪಾಲರು ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ಅಧ್ಯಾದೇಶ 2008 ಅನ್ನು (2008 ರ ಕರ್ನಾಟಕ ಅಧ್ಯಾದೇಶ 4) ಪ್ರಖ್ಯಾಪಿಸಿರುತ್ತಾರೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗುತ್ತಿದೆ.

**ಉಮೇಶ್ ವಿ. ಕತ್ತಿ**
ತೋಟಗಾರಿಕಾ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ.

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE KARNATAKA GOVERNMENT PARKS (PRESERVATION) (AMENDMENT) BILL, 2009**

**(L.A. Bill No. 11 of 2009)**

A Bill, further to amend the Karnataka Government Parks (preservation) Act, 1975.

Whereas, it is expedient further to amend the Karnataka Government parks (Preservation) Act 1975 (Karnataka Act 23 of 1975), for the purposes hereinafter appearing;

Be it enacted by the Karnataka State Legislature in the fifty-ninth year of the Republic of India as follows:-

**1. Short title and commencement :-** (1) This Act may be called the Karnataka Government Parks (Preservation) (Amendment) Act, 2008.

(2) It shall be deemed to have come into force with effect from 22nd day of November 2008.

**2. Insertion of new section 5 :-** After Section 4 of the Karnataka Government Parks (Preservation) Act, 1975 (Karnataka Act 23 of 1975) the following new section shall be inserted namely:-

**"5. Permission in certain cases :-** Notwithstanding anything contained in section 4, the State Government may subject to such conditions and restrictions as it may impose as regards construction, maintenance, management use and like matters alienate an area of,-

(a) 1223 sq. mtrs at Indira Gandhi Musical Fountain Park to the Bruhat Bangalore Mahanagara Palike for the purpose of widening of roads; and

(b) 1135. 18 sq. mtrs at Lalbagh gardens along the compound wall of west gate towards western side of the park (presently called R.V. Road) to Bangalore Metro Rail Corporation Limited for the purpose of construction of elevated Station for Metro Rail Project of Bangalore"

**3. Repeal and savings.-** (1) The Karnataka Government Parks (Preservation) (Amendment) Ordinance, 2008 (Karnataka Ordinance No. 4 of 2008) is hereby repealed.

(2) Notwithstanding such repeal anything done or any action taken under the principal Act as amended by the said ordinance shall be deemed to have been done or taken under the principal Act as amended by this Act.

## STATEMENT OF OBJECTS AND REASONS

It is considered necessary to amend the Karnataka Government Parks (Preservation) Act, 1975 to provide for alienation of certain area of Indira Gandhi Musical Foundation Park to Bruhat Bangalore Mahanagara Palike and Lalbagh to the Bangalore Metro Rail Corporation Ltd., for the following purposes; namely:-

(i) for widening of the roads by the Bruhat Bangalore Mahanagara Palike, and

(ii) for construction of elevated station for Metro Rail Project of Bangalore.

As the matter was urgent and both the Houses of the Karnataka State Legislature were not in session, the Government of Karnataka promulgated the Karnataka Government Parks (Preservation) (Amendment) Ordinance, 2008. (Karnataka Ordinance 4 of 2008)

This Bill seeks to replace the said Ordinance.

Hence the Bill.

## FINANCIAL MEMORANDUM

There is no extra expenditure involved in the proposed measure.

## EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY

It is considered necessary to amend the Karnataka Government Parks (Preservation) Act, 1975 to provide for alienation of certain area of Indira Gandhi Musical Fountain Park to Bruhat Bangalore Mahanagara Palike and Lalbagh to the Bangalore Metro Rail Corporation Ltd., for the following purposes; namely:-

(i) for widening of the roads by the Bruhat Bangalore Mahanagara Palike, and

(ii) for construction of elevated station for Metro Rail Project of Bangalore.

As the matter was urgent and both the Houses of the Karnataka State Legislature were not in session, the Government of Karnataka promulgated the Karnataka Government Parks (Preservation) (Amendment) Ordinance, 2008. (Karnataka Ordinance 4 of 2008)

This Bill seeks to replace the said Ordinance.

**UMESH V. KATTI**
Minister for Horticulture

**S.B. PATIL**
Secretary
Karnataka Legislative Assembly


# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೯ (ಮಾಘ ೨, ಶಕ ವರ್ಷ ೧೯೩೦) | ನಂ. ೩೬ |
|---|---|---|


## KARNATAKA LEGISLATIVE ASSEMBLY SECRETARIAT
## NOTIFICATION

**No. LGA/BLA/12/2009, Bangalore, Camp: Belagavi, Dated : 22nd January, 2009**

The following Bill was introduced in Legislative Assembly on 22.1.2009.

## THE UNIVERSITY OF HORTICULTURAL SCIENCES BILL, 2009
**(L.A. Bill No. 12 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

## ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ವಿಧೇಯಕ 2009
## (2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 12)

ಕರ್ನಾಟಕ ರಾಜ್ಯದಲ್ಲಿ ಒಂದು ಪ್ರತ್ಯೇಕ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ಮತ್ತು ನಿಗಮಿತಗೊಳಿಸುವುದಕ್ಕಾಗಿ ಹಾಗೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧಕಲ್ಪಿಸಲು ಒಂದು ವಿಧೇಯಕ;

ಕರ್ನಾಟಕ ರಾಜ್ಯದಲ್ಲಿ ಒಂದು ಪ್ರತ್ಯೇಕ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

### ಅಧ್ಯಾಯ – I
### ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು, 2008ರ ನವೆಂಬರ್ 22ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ವಿದ್ಯಾವಿಷಯಕ ಪರಿಷತ್ತು (ಅಕಾಡೆಮಿಕ್ ಕೌನ್ಸಿಲ್)" ಎಂದರೆ, ವಿಶ್ವವಿದ್ಯಾಲಯದ ವಿದ್ಯಾವಿಷಯಕ ಪರಿಷತ್ತು;

(2) "ಸಂಯೋಜಿತ ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರದಲ್ಲಿ ಇರುವ ಮತ್ತು ನಿಯಮಿಸಲಾದ ಶಾಸನಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಮತ್ತು ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಡೆಸುವ ಪರೀಕ್ಷೆಗಳಿಗೆ ಪ್ರವೇಶ ಪಡೆಯಲು ಅವಶ್ಯವಾದ ವ್ಯಾಸಂಗ ಕ್ರಮಗಳನ್ನು ಒದಗಿಸುವ ಕಾಲೇಜು ಅಥವಾ ಸಂಸ್ಥೆ;

(3) "ಪ್ರಾಧಿಕಾರ" ಎಂದರೆ, 12ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ;

(4) "ಮಂಡಳಿ" ಎಂದರೆ, ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿ;

(5) "ಅಧ್ಯಯನ ಮಂಡಳಿ" ಎಂದರೆ ಫ್ಯಾಕಲ್ಟಿ ಹಂತದಲ್ಲಿ ವಿದ್ಯಾ ವ್ಯವಹಾರಗಳ ಸಮಿತಿ;

(6) "ಕ್ಯಾಂಪಸ್" ಎಂದರೆ ತೋಟಗಾರಿಕೆಗೆ ಸಂಬಂಧಿಸಿದಂತೆ ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಚಟುವಟಿಕೆಗೆ ಸಂಬಂಧಿಸಿದ ಕಾಲೇಜು, ವಿದ್ಯಾರ್ಥಿನಿಲಯಗಳು, ಸಿಬ್ಬಂದಿ ನಿವಾಸಗಳು, ಹೊಲಭೂಮಿಗಳು, ಮತ್ತಿತರ ಸೊತ್ತುಗಳನ್ನು ಒಳಗೊಳ್ಳುವ ಒಂದು ಆವರಣ;

(7) "ಕಾಲೇಜು" ಎಂದರೆ, ವಿಶ್ವವಿದ್ಯಾಲಯದ ನೇರ ಆಡಳಿತದ ಅಡಿಯಲ್ಲಿ ಬರುವ ಮತ್ತು ಅದರ ವ್ಯವಸ್ಥಾಪನೆ ಅಡಿಯಲ್ಲಿ ಬರುವ ಕೇಂದ್ರ ಕಾರ್ಯಸ್ಥಾನದಲ್ಲಿ, ಕ್ಯಾಂಪಸ್‌ನಲ್ಲಿ ಅಥವಾ ಯಾವುದೇ ಇತರ ಸ್ಥಳದಲ್ಲಿ ಇರುವಂಥ ಘಟಕ ಕಾಲೇಜು;

(8) "ಕುಲಾಧಿಪತಿ"ಎಂದರೆ ವಿಶ್ವವಿದ್ಯಾಲಯದ ಕುಲಾಧಿಪತಿ;

(9) "ಲೆಕ್ಕ ನಿಯಂತ್ರಕರು " ಎಂದರೆ ವಿಶ್ವವಿದ್ಯಾಲಯದ ಲೆಕ್ಕ ನಿಯಂತ್ರಕರು;

(10) "ಡೀನ್" ಎಂದರೆ, ವಿಶ್ವವಿದ್ಯಾಲಯದ ಘಟಕ ಕಾಲೇಜಿನ ಅಥವಾ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಮುಖ್ಯಸ್ಥ;

(11) "ಡೀನ್ – ವಿದ್ಯಾರ್ಥಿ ಕ್ಷೇಮಾಭಿವೃದ್ಧಿ" ಎಂದರೆ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ, ಸಲಹೆ ನೀಡಿಕೆ ಮತ್ತು ವಿದ್ಯಾರ್ಥಿಗಳ ಉದ್ಯೋಗ ನಿಯೋಜನೆಯ ಡೀನ್;

(12) "ನಿರ್ದೇಶಕ" ಎಂಬುದು ವಿದ್ಯಾ ನಿರ್ದೇಶಕರು, ಸಂಶೋಧನಾ ನಿರ್ದೇಶಕರು ಮತ್ತು ವಿಸ್ತರಣಾ ನಿರ್ದೇಶಕರನ್ನು ಒಳಗೊಂಡಿರುತ್ತದೆ;

(13) "ದೂರ ಶಿಕ್ಷಣ" ಎಂದರೆ ವ್ಯಾಸಂಗ ಕ್ರಮಗಳನ್ನು ಖುದ್ದು ಹಾಜರಾಗಿ ಕಲಿಯಲಾಗದ ಭೌತಿಕವಾಗಿ ಬೋಧನಾ ಸ್ಥಳದಿಂದ ದೂರ ಇರುವಂಥ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ತಲುಪಿಸುವ ಉದ್ದೇಶವುಳ್ಳ ಶಿಕ್ಷಣ ಕ್ಷೇತ್ರ. ಇಲ್ಲಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ತಮಗೆ ಅನುಕೂಲವಾದಂಥ ಸಮಯದಲ್ಲಿ ಮುದ್ರಿತ/ವಿದ್ಯುನ್ಮಾನ/ಅಥವಾ ಇತರ ತಾಂತ್ರಿಕ ಮಾಧ್ಯಮಗಳ ಮೂಲಕ ವಿಚಾರ ವಿನಿಮಯ ಮಾಡಿ ಪರಸ್ಪರ ಸಂವಾದ ನಡೆಸಬಹುದು;

(14) "ವಿಸ್ತರಣಾ ಶಿಕ್ಷಣ ಪರಿಷತ್ತು" ಎಂದರೆ, ವಿಶ್ವವಿದ್ಯಾನಿಲಯದ ವಿಸ್ತರಣಾ ಶಿಕ್ಷಣ ಪರಿಷತ್ತು;

(15) "ವಿಸ್ತರಣಾ ಶಿಕ್ಷಣ" ಎಂದರೆ, ತೋಟಗಾರಿಕೆ ಮತ್ತು ಸಂಬಂಧಪಟ್ಟ ವಿಜ್ಞಾನಗಳು ಹಾಗೂ ತೋಟಗಾರಿಕೆ ಉತ್ಪಾದನೆಗಳು ಮತ್ತು ಉತ್ಪನ್ನಗಳ ಮಾರಾಟಕ್ಕೆ ಸಂಬಂಧಿಸಿದ ವೈಜ್ಞಾನಿಕ ತಂತ್ರಜ್ಞಾನದ ವಿವಿಧ ಹಂತಗಳಿಗೆ ಸಂಬಂಧಪಟ್ಟ ರೈತರು, ಗೃಹಿಣಿಯರು, ಉದ್ಯಮಿಗಳು ಮತ್ತಿತರ ಸಮೂಹಗಳಿಗೆ ತರಬೇತಿಯನ್ನು ನೀಡುವುದಕ್ಕಾಗಿ ಸಂಬಂಧಪಟ್ಟ ಶೈಕ್ಷಣಿಕ ಚಟುವಟಿಕೆಗಳು ಮತ್ತು ಇದು ವಿಶ್ವವಿದ್ಯಾಲಯದ ವಿಭಾಗಗಳು, ವಿಜ್ಞಾನ ಕೇಂದ್ರಗಳು ಮತ್ತು ಅದಕ್ಕೆ ಸಂಯೋಜಿತವಾದ ಕಾಲೇಜುಗಳ ಮೂಲಕ ಹೊಸ ಹೊಸ ತಂತ್ರಜ್ಞಾನಗಳು ಮತ್ತು ಸಂಶೋಧನೆಗಳನ್ನು ಹೊಲಗಳು ಮತ್ತು ಹೊಲಮನೆಗಳ ಬಾಗಿಲುಗಳಿಗೆ ಕೊಂಡೊಯ್ಯುವಂಥ ಪ್ರಾತ್ಯಕ್ಷಿಕೆಗಳನ್ನೂ ಒಳಗೊಳ್ಳುತ್ತದೆ;

(16) "ಫ್ಯಾಕಲ್ಟಿ" ಎಂದರೆ, ಅಧ್ಯಾದೇಶ ಮತ್ತು ಶಾಸನಗಳಲ್ಲಿ ನಿರ್ದಿಷ್ಟವಾಗಿ ಹೇಳಿರುವ ವಿಶ್ವವಿದ್ಯಾಲಯದ ಫ್ಯಾಕಲ್ಟಿ;

(17) "ಸರ್ಕಾರ" ಎಂದರೆ ಕರ್ನಾಟಕ ಸರ್ಕಾರ;

(18) "ವಿಭಾಗ ಮುಖ್ಯಸ್ಥ" ಎಂದರೆ ವಿಶ್ವವಿದ್ಯಾಲಯ ಮತ್ತು ಘಟಕ ಕಾಲೇಜುಗಳ ಒಂದು ವಿಭಾಗದ ಮುಖ್ಯಸ್ಥ;

(19) "ತೋಟಗಾರಿಕೆ" ಎಂಬುದು,

(ಎ) ತರಕಾರಿಗಳು, ಹಣ್ಣುಗಳು, ಹೂ, ಸಾಂಬಾರ ಪದಾರ್ಥಗಳು ನೆಡುತೋಪು ಬೆಳೆಗಳು, ಔಷಧೀಯ ಮತ್ತು ಸುಗಂಧ ಸಸ್ಯಗಳು ಮುಂತಾದ ತೋಟಗಾರಿಕೆ ಬೆಳೆಗಳ ಎಲ್ಲಾ ಅಂಶಗಳು;

(ಬಿ) ಕೃಷಿ ಬೆಳೆಗಳು;

(ಸಿ) ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆ;

(ಡಿ) ಭೂಸಾರ ಮತ್ತು ಜಲನಿಧಿ ನಿರ್ವಹಣೆ;

(ಇ) ಉತ್ಪಾದನೆ ಮತ್ತು ಸಂರಕ್ಷಣೆಯೂ ಸೇರಿದಂತೆ ಬೆಳೆ ಸುಧಾರಣೆ;

(ಎಫ್) ನೀರಾವರಿ ಮತ್ತು ಕಳೆ ನಿರ್ವಹಣೆ;

(ಜಿ) ಬೀಜ ಮತ್ತು ಸಸಿ ಸಾಮಾಗ್ರಿಗಳ ಉತ್ಪಾದನೆ;

(ಎಚ್) ಭೂಬಳಕೆ ಯೋಜನೆ ಮತ್ತು ನಿರ್ವಹಣೆ;

(ಐ) ಭೂ–ಪ್ರಸಾಧನ ಕಲೆ;

(ಜೆ) ತೋಟದ ಮರಗಳ ಕೃಷಿ, ಫಾರಂ ವನ ವಿಜ್ಞಾನ ಮತ್ತು ಅರಣ್ಯ ಹಾಗೂ ವನ್ಯಜೀವಿ ನಿರ್ವಹಣೆ;

(ಕೆ) ತೋಟಗಾರಿಕೆ ಅರ್ಥಶಾಸ್ತ್ರ;

(ಎಲ್) ಮಾರಾಟಗಾರಿಕೆ, ಸಹಕಾರ ಮತ್ತು ವ್ಯವಹಾರ ನಿರ್ವಹಣೆ;

(ಎಂ) ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ;

(ಎನ್) ಸಂಸ್ಕರಣೆಯೂ ಸೇರಿದಂತೆ ಸುಗ್ಗಿ ತರುವಾಯದ ನಿರ್ವಹಣೆ;

(ಒ) ಜೈವಿಕ ತಂತ್ರಜ್ಞಾನ;

(ಪಿ) ಅಣಬೆ ಕೃಷಿ;

(ಕ್ಯೂ) ತೋಟಗಾರಿಕೆ ಇಂಜಿನಿಯರಿಂಗ್;

(ಆರ್) ಕೋಳಿ ಸಾಗಾಣಿಕೆಯೂ ಸೇರಿದಂತೆ ಪಶು ವೈದ್ಯಕೀಯ ಮತ್ತು ಪ್ರಾಣಿ ವಿಜ್ಞಾನಗಳು;

(ಎಸ್) ಹೈನುಗಾರಿಕೆ ವಿಜ್ಞಾನ ಮತ್ತು ತಂತ್ರಜ್ಞಾನ;

(ಟಿ) ಮೀನು ಕೃಷಿ ಮತ್ತು ಮೀನುಗಾರಿಕೆ ನಿರ್ವಹಣೆ;

(ಯು) ಗ್ರಾಮೀಣಾಭಿವೃದ್ಧಿ;

(ವಿ) ಆಕರ ವಿಜ್ಞಾನಗಳು ಮತ್ತು ಮಾನವಿಕ ಶಾಸ್ತ್ರಗಳು;

(ಡಬ್ಲ್ಯೂ) ಜೇನು ಸಾಕಾಣಿಕೆ ಮತ್ತು ರೇಷ್ಮೆ ವ್ಯವಸಾಯ;

(ಎಕ್ಸ್) ಸರ್ಕಾರ/ ಭಾರತೀಯ ಕೃಷಿ ಸಂಶೋಧನೆ ಪರಿಷತ್ತು ಸಲಹೆ ನೀಡುವ ತೋಟಗಾರಿಕೆಗೆ ಸಂಬಂಧಿಸಿದ ಯಾವುದೇ ಇತರ ವಿಷಯ.

– ಇವುಗಳ ಮೂಲಭೂತ ಮತ್ತು ಅನ್ವಯಿಕ ವಿಜ್ಞಾನಗಳು ಒಳಗೊಳ್ಳುತ್ತವೆ.

(20) "ತೋಟಗಾರಿಕೆ ಸಂಶೋಧನಾ ಕೇಂದ್ರ" ಎಂದರೆ ವಲಯ ತೋಟಗಾರಿಕೆ ಸಂಶೋಧನಾ ಕೇಂದ್ರ. ಪ್ರಮುಖ ತೋಟಗಾರಿಕೆ ಸಂಶೋಧನಾ ಕೇಂದ್ರ, ಪ್ರಾದೇಶಿಕ ತೋಟಗಾರಿಕೆ ಸಂಶೋಧನಾ ಕೇಂದ್ರ, ವಿಶ್ವವಿದ್ಯಾಲಯದ ತೋಟಗಾರಿಕೆ ಸಂಶೋಧನಾ ಕೇಂದ್ರ ಅಥವಾ ಇನ್ಯಾವುದೇ ಸಂಶೋಧನಾ ಕೇಂದ್ರ .

(21) "ವಿದ್ಯಾರ್ಥಿನಿಲಯ" ಎಂದರೆ, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿಶ್ವವಿದ್ಯಾಲಯದ ಭಾಗವಾಗಿ ಅಥವಾ ಪ್ರತ್ಯೇಕವಾಗಿ ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಮನ್ನಣೆ ನೀಡಿರುವ ಒಂದು ನಿವಾಸ ಘಟಕ;

(22) "ಅಧಿಕಾರಿ" ಎಂದರೆ, ಅಧಿನಿಯಮ ಅಥವಾ ಶಾಸನಗಳಲ್ಲಿ ನಿರ್ದಿಷ್ಟಪಡಿಸಿರುವಂತೆ ವಿಶ್ವವಿದ್ಯಾಲಯದ ಅಧಿಕಾರಿ.

(23) "ಸಾರ್ವಜನಿಕ – ಖಾಸಗಿ ಪಾಲುಗಾರಿಕೆ" ಎಂದರೆ, ತೋಟಗಾರಿಕೆ ಅಭಿವೃದ್ಧಿ ಮತ್ತು ಉತ್ತೇಜನಕ್ಕಾಗಿ ವಿಶ್ವವಿದ್ಯಾನಿಲಯ ಮತ್ತು ಸಾರ್ವಜನಿಕ/ಖಾಸಗಿ ಸಂಘಗಳ ನಡುವೆ ಮಾಡಿಕೊಂಡ ಜಂಟಿ ಉದ್ಯಮ.

(24) "ಸಂಶೋಧನೆ" ಎಂದರೆ, ತಂತ್ರಜ್ಞಾನಗಳ ಅಭಿವೃದ್ಧಿ.

(25) "ಆವರ್ತಕ ನಿಧಿ" ಎಂದರೆ, ತಂತ್ರಜ್ಞಾನಗಳನ್ನು, ಬೀಜ ಮತ್ತು ಸಸಿ ಸಾಮಾಗ್ರಿಗಳನ್ನು ಅಭಿವೃದ್ಧಿಪಡಿಸಲು ಮತ್ತು ಮುಂದಿನ ಅಭಿವೃದ್ಧಿಗಾಗಿ ಅದೇ ಹಣವನ್ನೇ ಪುನರಾವರ್ತಿಸಿ ತೊಡಗಿಸುವುದಕ್ಕಾಗಿ ವ್ಯಕ್ತಿಗಳಿಗೆ/ಸಂಸ್ಥೆಗಳಿಗೆ ಹಂಚಲಾದ ಬಜೆಟ್.

(26) "ನಿಯಮಿಸಲಾದುದು" ಎಂದರೆ, ವಿಶ್ವವಿದ್ಯಾಲಯದ ಶಾಸನಗಳಿಂದ ನಿಯಮಿಸಲಾದುದು;

(27) "ಕುಲಸಚಿವ" ಎಂದರೆ ವಿಶ್ವವಿದ್ಯಾಲಯದ ಕುಲಸಚಿವ.

(28) "ವಿನಿಯಮಗಳು" ಎಂದರೆ, 54ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ವಿನಿಯಮಗಳು;

(29) "ಸಂಶೋಧನಾ ಪರಿಷತ್ತು" ಎಂದರೆ ವಿಶ್ವವಿದ್ಯಾಲಯದ ಸಂಶೋಧನಾ ಪರಿಷತ್ತು.

(30) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿ;

(31) "ಶಾಸನಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನೀತಿಗಳು, ಕಾರ್ಯವಿಧಾನಗಳು ಮುಂತಾದ ಅಂಶಗಳಿಗೆ ವ್ಯಾಪಿಸುವ ವಿಶ್ವವಿದ್ಯಾಲಯದ ಶಾಸನಗಳು;

(32) "ವಿದ್ಯಾರ್ಥಿ" ಎಂದರೆ, ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧವಾಗಿ ಸ್ಥಾಪಿಸಲಾದ ಪದವಿ, ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪಡೆಯಲು ವ್ಯಾಸಂಗ ಕ್ರಮದಲ್ಲಿ ಅಧ್ಯಯನ ಮಾಡುವುದಕ್ಕಾಗಿ ವಿಶ್ವವಿದ್ಯಾಲಯದ ಘಟಕ ಕಾಲೇಜಿನಲ್ಲಿ ಅಥವಾ ಒಂದು ಸಂಯೋಜಿತ ಕಾಲೇಜಿನಲ್ಲಿ ಪ್ರವೇಶ ನೀಡಿ ಹೆಸರುಪಟ್ಟಿಯಲ್ಲಿ ಸೇರಿಸಲಾಗಿರುವಂಥ ಒಬ್ಬ ವ್ಯಕ್ತಿ;

(33) "ಅಧ್ಯಾಪಕರು" ಎಂದರೆ, ಸಹಾಯಕ ಪ್ರಾಧ್ಯಾಪಕರ ದರ್ಜೆಗೆ ಕಡಿಮೆಯಿಲ್ಲದ ಬೋಧನೆ ನೀಡುವ ಅಥವಾ ಸಂಶೋಧನೆ ಮತ್ತು /ಅಥವಾ ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುವ ಮತ್ತು ಅದಕ್ಕೆ ಮಾರ್ಗದರ್ಶನ ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದಿಂದ ನೇಮಕಗೊಂಡ ಅಥವಾ ಮಾನ್ಯತೆ ಪಡೆದ ಒಬ್ಬ ವ್ಯಕ್ತಿ ಮತ್ತು ಇದು ಅಧ್ಯಾಪಕರೆಂದು ಶಾಸನಗಳ ಮೂಲಕ ಘೋಷಿಸಲ್ಪಡಬಹುದಾದ ಇತರೆ ಯಾವುದೇ ವ್ಯಕ್ತಿಯನ್ನೂ ಒಳಗೊಳ್ಳಬಹುದು.

(34) "ತಂತ್ರಜ್ಞಾನ ವರ್ಗಾವಣೆ (ಟಿಓಟಿ) ಘಟಕಗಳು" ಎಂದರೆ, ವಿಜ್ಞಾನ ಕೇಂದ್ರ, ವಿಸ್ತರಣಾ ಶಿಕ್ಷಣ ಘಟಕಗಳು (ಇಇಯುಎಸ್), ಸಿಬ್ಬಂದಿ ತರಬೇತಿ ಘಟಕಗಳು(ಎಸ್‌ಟಿಯು), ತೋಟಗಾರಿಕೆ ತಂತ್ರಜ್ಞಾನ ಮಾಹಿತಿ ಕೇಂದ್ರ (ಹೆಚ್‌ಟಿಐಸಿ). ಬೇಕರಿ ತರಬೇತಿ ಘಟಕ(ಬಿಟಿಯು), ಸುಗ್ಗಿ ತರುವಾಯದ ತಂತ್ರಜ್ಞಾನದ ಸಂಸ್ಥೆ (ಪಿಹೆಚ್‌ಟಿಐ) ಮತ್ತು ವಿಶ್ವವಿದ್ಯಾಲಯವು ಸ್ಥಾಪಿಸಿದಂಥ ಇತರ ಕೇಂದ್ರಗಳು.

(35) "ಘಟಕ" ಎಂದರೆ, ಕಾಲೇಜು/ಸಂಶೋಧನಾ ಕೇಂದ/ ವಿಸ್ತರಣಾ ಶಿಕ್ಷಣ ಘಟಕಗಳು/ ತೋಟಗಾರಿಕೆ ವಿಜ್ಞಾನ ಕೇಂದ್ರಗಳು ಮತ್ತು ತೋಟಗಾರಿಕೆಗೆ ಸಂಬಂಧಪಟ್ಟ ಇತರ ಸಂಸ್ಥೆಗಳು.

(36) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ;

(37)"ವಿಶ್ವವಿದ್ಯಾಲಯ ಪ್ರದೇಶ" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿನ ಪ್ರದೇಶ;

(38) "ಕುಲಪತಿ" ಎಂದರೆ, ವಿಶ್ವವಿದ್ಯಾಲಯದ ಕುಲಪತಿ.

(39) "ವಿಜ್ಞಾನ ಕೇಂದ್ರ " ಎಂದರೆ, ತೋಟಗಾರಿಕೆ ವಿಜ್ಞಾನ ಕೇಂದ್ರ (ಟಿವಿಕೆ), ಕೃಷಿ ವಿಜ್ಞಾನ ಕೇಂದ್ರ (ಕೆವಿಕೆ).

## ಅಧ್ಯಾಯ – II

## ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ ಮತ್ತು ನಿಗಮನ.–** (1) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಕೂಡಲೇ ರಾಜ್ಯದಲ್ಲಿ **"ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ"** ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವು ಸ್ಥಾಪನೆಯಾಗತಕ್ಕದ್ದು.

(2) ವಿಶ್ವವಿದ್ಯಾಲಯವು ಒಂದು ನಿಗಮಿತ ನಿಕಾಯವಾಗಿರತಕ್ಕದ್ದು, ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(3) ಈ ಅಧಿನಿಯಮದಲ್ಲಿ ನಮೂದಿಸಲಾದಂತೆ ಅಥವಾ ಶಾಸನಗಳಲ್ಲಿ ಉಪಬಂಧ ಕಲ್ಪಿಸಲಾದಂತೆ, ವಿಶ್ವವಿದ್ಯಾಲಯವು ಕುಲಾಧಿಪತಿಯವರು, ಒಬ್ಬರು ಕುಲಪತಿಯವರು, ವ್ಯವಸ್ಥಾಪನಾ ಮಂಡಳಿ, ವಿದ್ಯಾ ವಿಷಯಕ ಪರಿಷತ್ತು, ಸಂಶೋಧನಾ ಪರಿಷತ್ತು, ವಿಸ್ತಾರಣಾ ಶಿಕ್ಷಣ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳು ಹಾಗೂ ಅಧಿಕಾರಿಗಳು ಮತ್ತು ಘಟಕ ನಿಕಾಯಗಳನ್ನು ಹೊಂದಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸಲು ಮತ್ತು ಧಾರಣ ಮಾಡಲು, ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಅದರಲ್ಲಿ ನಿಹಿತವಾಗಿರಬಹುದಾದ ಅಥವಾ ಅದರಿಂದ ಆರ್ಜಿತವಾಗಿರಬಹುದಾದ ಯಾವುದೇ ಚರ ಮತ್ತು ಸ್ಥಿರ ಸ್ವತ್ತನ್ನು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಡನೆ ಗುತ್ತಿಗೆಗೆ ನೀಡಲು, ಮಾರಾಟ ಮಾಡಲು ಅಥವಾ ಅನ್ಯಥಾ ವರ್ಗಾವಣೆ ಮಾಡಲು ಮತ್ತು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಅಥವಾ ಇತರ ಯಾವುದೇ ಅನುಮೋದಿತ ಮೂಲಗಳಿಂದ ಹಣವನ್ನು ಸಾಲ ಪಡೆದು ಮತ್ತು ಈ ಅಧ್ಯಾದೇಶದ ಉದ್ದೇಶಕ್ಕಾಗಿ ಅವಶ್ಯವಾದ ಇತರ ಎಲ್ಲಾ ಕಾರ್ಯಗಳನ್ನು ನಿರ್ವಹಿಸಲು ಸಕ್ಷಮವಾಗಿರತಕ್ಕದ್ದು.

(5) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪ್ರತಿವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂತಹ ದಾವೆಗಳಲ್ಲಿನ ಹಾಗೂ ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(6) ವಿಶ್ವವಿದ್ಯಾಲಯದ ಕೇಂದ್ರ ಕಛೇರಿಯು ಬಾಗಲಕೋಟೆಯಲ್ಲಿ ಇರತಕ್ಕದ್ದು.

**4. ಅಧಿಕಾರ ಕ್ಷೇತ್ರ ವ್ಯಾಪ್ತಿ ಮತ್ತು ಘಟಕ ನಿಕಾಯಗಳು.–** (1) ಈ ಅಧಿನಿಯಮದಲ್ಲಿ ಪರಿಭಾಷಿಸಲಾದಂತೆ, ವಿಶ್ವವಿದ್ಯಾಲಯದ ಅಥವಾ ಕಾಲೇಜು ಮಟ್ಟದಲ್ಲಿ ತೋಟಗಾರಿಕೆ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಭೋಧನೆಗೆ ಸಂಬಂಧಪಟ್ಟಂತೆ ಈ ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿ ಮತ್ತು ಜವಾಬ್ದಾರಿಯು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗಿರತಕ್ಕದ್ದು.

(2) ವಿಶ್ವವಿದ್ಯಾಲಯವು ಸ್ಥಾಪನೆಯಾದ ದಿನಾಂಕದಂದು ಮತ್ತು ದಿನಾಂಕದಿಂದ ವಿಶ್ವವಿದ್ಯಾಲಯದ ಘಟಕ ಅಥವಾ ಸಂಯೋಜಿತ ಕಾಲೇಜು ಆಗಿ ಅಲ್ಲದೆ ಅನ್ಯಥಾ ತೋಟಗಾರಿಕೆಯಲ್ಲಿ ಶಿಕ್ಷಣವನ್ನು ನೀಡುವ ಯಾವುದೇ ಹೊಸ ಕಾಲೇಜನ್ನು ಸ್ಥಾಪಿಸತಕ್ಕದ್ದಲ್ಲ.

(3) ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿ ಮತ್ತು ಪ್ರಾಧಿಕಾರದಡಿಯಲ್ಲಿ ಬರುವ ಎಲ್ಲಾ ತೋಟಗಾರಿಕೆ ಕಾಲೇಜುಗಳು, ತೋಟಗಾರಿಕೆ ಸಂಶೋಧನಾ ಕೇಂದ್ರಗಳು, ತೋಟಗಾರಿಕೆ ವಿಜ್ಞಾನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳು ವಿಶ್ವವಿದ್ಯಾಲಯದ ಘಟಕ ಭಾಗಗಳಾಗಿ ವಿಶ್ವವಿದ್ಯಾಲಯದ ಅಧಿಕಾರಿಗಳು ಮತ್ತು ಪ್ರಾಧಿಕಾರಗಳ ಪೂರ್ಣ ಆಡಳಿತ ನಿರ್ವಹಣೆ ಮತ್ತು ನಿಯಂತ್ರಣದಡಿಯಲ್ಲಿ ಬರತಕ್ಕದ್ದು. ವಿಶ್ವವಿದ್ಯಾಲಯದಿಂದ ಸಂಯೋಜಿತ ಕಾಲೇಜು ಎಂದು ಮಾನ್ಯತೆ ಪಡೆದ ಹೊರತು ಯಾವ ಘಟಕವನ್ನು ಸಂಯೋಜಿತ ಕಾಲೇಜು ಎಂದು ಮಾನ್ಯ ಮಾಡತಕ್ಕದ್ದಲ್ಲ.

(4) ವಿಶ್ವವಿದ್ಯಾಲಯವು ಪ್ರಾದೇಶಿಕ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿ ಹಾಗೂ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಸಂಶೋಧನೆ ವಿಸ್ತರಣೆ ಮತ್ತು ನಿರ್ವಹಣೆಗಳನ್ನೊಳಗೊಂಡ ತನ್ನ ಘಟಕ ನಿಕಾಯಗಳ ಸ್ಥಾಪನೆ ಮತ್ತು ಅಭಿವೃದ್ಧಿಗೆ ಜವಾಬ್ದಾರಿಯನ್ನು ವಹಿಸಿಕೊಳ್ಳಬಹುದು.

(5) ಪ್ರತಿಯೊಂದು ವಿಶ್ವವಿದ್ಯಾಲಯವು ಅನೇಕ ವಿಭಿನ್ನ ಶಾಸ್ತ್ರಗಳ ದೃಷ್ಟಿಯಿಂದ ಅಧ್ಯಯನ ಮಾಡುವ ವಿದ್ಯಾ ವಿಷಯಕ ಕಾರ್ಯಕ್ರಮಗಳ ಮತ್ತು ಸಂಶೋಧನಾ ಯೋಜನೆಗಳ ಸಂಬಂಧದಲ್ಲಿ ಇತರ ವಿಶ್ವವಿದ್ಯಾಲಯಗಳು ಅಥವಾ ಭಾರತದ ಮತ್ತು ವಿದೇಶದ ಖ್ಯಾತ ಸಂಸ್ಥೆಗಳೊಂದಿಗೆ ವಿದ್ಯಾವಿಷಯಕ ಕಾರ್ಯಕ್ರಮಗಳ ಸಹಯೋಗ ಮಾಡಿಕೊಳ್ಳಬಹುದು.

**5. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ಈ ವಿಶ್ವವಿದ್ಯಾಲಯವನ್ನು ಈ ಮುಂದಿನ ಧ್ಯೇಯೋದ್ದೇಶಗಳಿಗಾಗಿ ಸ್ಥಾಪಿಸಲಾಗಿದೆ ಮತ್ತು ನಿಗಮಿತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

(ಎ) 2ನೇ ಪ್ರಕರಣದ (19)ನೇ ಖಂಡದಲ್ಲಿ ನಿರ್ದಿಷ್ಟಪಡಿಸಿದಂತೆ ಅಧ್ಯಯನದ ವಿವಿಧ ಶಾಖೆಗಳಲ್ಲಿ ಉತ್ತಮ ಗುಣಮಟ್ಟದ ಮಾನವ ಸಂಪನ್ಮೂಲವನ್ನು ಅಭಿವೃದ್ಧಿ ಪಡಿಸುವುದಕ್ಕಾಗಿ ಶಿಕ್ಷಣ ನೀಡುವುದಕ್ಕೆ ಏರ್ಪಾಡು ಮಾಡುವುದು;

(ಬಿ) ದೂರ ಶಿಕ್ಷಣವೂ ಸೇರಿದಂತೆ ಕಲಿಕೆ ಮತ್ತು ಸಂಶೋಧನೆಗೆ ಅದರಲ್ಲೂ ತೋಟಗಾರಿಕೆ ಮತ್ತು ಇತರೆ ಸಂಬಂಧಿತ ವಿಜ್ಞಾನದ ಕಲಿಕೆ ಮತ್ತು ಸಂಶೋಧನೆಯ ಮುನ್ನಡೆಗೆ ಉತ್ತೇಜನ ನೀಡುವುದು;

(ಸಿ) ಜನತೆಗೆ ವಿಶೇಷವಾಗಿ ರಾಜ್ಯದ ಗ್ರಾಮಾಂತರ ಜನರಿಗೆ, ಅಂಥ ವಿಜ್ಞಾನ ಮತ್ತು ತಂತ್ರಜ್ಞಾನಗಳ ವಿಸ್ತರಣಾ ಶಿಕ್ಷಣವನ್ನು ಕೈಕೊಳ್ಳುವುದು;

(ಡಿ) ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಹಾಗೂ ಅರೆಸರ್ಕಾರಿ/ಸರ್ಕಾರಿ/ಖಾಸಗಿ ಮತ್ತಿತರ ಶೈಕ್ಷಣಿಕ, ಕೈಗಾರಿಕಾ, ಸಂಶೋಧನೆ ಸಂಸ್ಥೆಗಳೊಂದಿಗೆ ಪಾಲುಗಾರಿಕೆ ಮತ್ತು ಜೋಡಣೆಗಳನ್ನು ಉತ್ತೇಜಿಸುವುದು.

(ಇ) ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲದಿಂದ ಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರ ಉದ್ದೇಶಗಳು;

6. **ವಿಶ್ವವಿದ್ಯಾಲಯಕ್ಕೆ ಪ್ರವೇಶ.–** (1) ವಿಶ್ವವಿದ್ಯಾಲಯವು ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ಎಲ್ಲ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಪ್ರವೇಶಕ್ಕಾಗಿ ಅಥವಾ ವಿಶ್ವವಿದ್ಯಾಲಯದ ಪಟ್ಟಿಗಳಲ್ಲಿ ಉಳಿದುಕೊಳ್ಳುವುದಕ್ಕಾಗಿ ನಿಯಮಿಸಲಾದ ಶೈಕ್ಷಣಿಕ ಗುಣಮಟ್ಟಗಳನ್ನು ಪೂರೈಸದಿರುವ ಯಾವೊಬ್ಬ ವ್ಯಕ್ತಿಗೆ ಅಥವಾ ಯಾವ ವ್ಯಕ್ತಿಗಳ ಶೈಕ್ಷಣಿಕ ದಾಖಲೆಗಳು, ಪದವಿಯನ್ನು ನೀಡುವುದಕ್ಕಾಗಿ ಅಗತ್ಯಪಡಿಸಲಾದ ಕನಿಷ್ಠ ಗುಣಮಟ್ಟಕ್ಕಿಂತ ಕಡಿಮೆ ಇವೆಯೋ ಆ ವ್ಯಕ್ತಿಗಳಿಗೆ ಅಥವಾ ಯಾರ ವೈಯಕ್ತಿಕ ನಡತೆಯು ವಿಶ್ವವಿದ್ಯಾಲಯದ ಹಿತದೃಷ್ಟಿಗೆ ಅಥವಾ ಇತರ ವಿದ್ಯಾರ್ಥಿಗಳ ಮತ್ತು ಸಿಬ್ಬಂದಿಯ ಸೂಕ್ತ ಹಕ್ಕುಗಳಿಗೆ ಮತ್ತು ವಿಶೇಷಾಧಿಕಾರಗಳಿಗೆ ಹಾನಿಕಾರಕವಾಗಿರುವಂಥದ್ದಾಗಿದೆಯೋ ಆ ವ್ಯಕ್ತಿಗಳಿಗೆ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ:

ಮತ್ತು ಪರಂತು, ಈ ಪ್ರಕರಣದಲ್ಲಿರುವುದಾವುದೂ, ವಿದ್ಯಾವಿಷಯಕ ಪರಿಷತ್ತು ನಿರ್ಧರಿಸಿದಂತೆ ವಿಶ್ವವಿದ್ಯಾಲಯದ ಅಥವಾ ಯಾವುದೇ ನಿರ್ದಿಷ್ಟ ಕಾಲೇಜಿನ ಅಥವಾ ವಿಭಾಗದ ಲಭ್ಯವಿರುವ ಫ್ಯಾಕಲ್ಟಿಗಳಲ್ಲಿ ಸ್ಥಳಾವಕಾಶ ನೀಡಬಹುದಾದದ್ದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿಗೆ ಯಾವುದೇ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡಲು ವಿಶ್ವವಿದ್ಯಾಲಯವನ್ನು ಅಗತ್ಯಪಡಿಸುತ್ತದೆಂದು ಭಾವಿಸತಕ್ಕದ್ದಲ್ಲ.

(2) (1) ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರವು ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಕನಿಷ್ಠ ವಿದ್ಯಾರ್ಹತೆಗಳನ್ನು ಹೊಂದಿದ ಮಹಿಳೆಯರಿಗೆ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ, ಕೃಷಿಕರ ಮಕ್ಕಳಿಗೆ ಇತರೆ ರಾಜ್ಯಗಳ ವಿದ್ಯಾರ್ಥಿಗಳಿಗೆ, ವಿದೇಶಿ ವಿದ್ಯಾರ್ಥಿಗಳಿಗೆ ಮತ್ತು ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಕೃಷಿ ಕುರಿತ ಪ್ರಾಯೋಗಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸ್ವಾತಂತ್ರ ಹೋರಾಟಗಾರರ, ಸೈನಿಕರ ಮತ್ತು ಮಾಜಿ ಸೈನಿಕರ ಮಕ್ಕಳಿಗೆ ಹಾಗೂ ಪ್ರತಿಪಾಲಿತರಿಗೆ ಮತ್ತು ಸರ್ಕಾರವು ಈ ಸಂಬಂಧದಲ್ಲಿ ಘೋಷಿಸಬಹುದಾದಂಥ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ನಾಗರಿಕರಿಗೆ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಸ್ಥಾನಗಳನ್ನು ಮೀಸಲಿರಿಸತಕ್ಕದ್ದು ಎಂದು ನಿರ್ದೇಶಿಸತಕ್ಕದ್ದು ಮತ್ತು ಹಾಗೆ ನಿರ್ದೇಶನಗಳನ್ನು ನೀಡಿದಾಗ ವಿಶ್ವವಿದ್ಯಾಲಯವು ಅದರಂತೆ ಮೀಸಲಾತಿಗಳನ್ನು ಮಾಡತಕ್ಕದ್ದು.

**ವಿವರಣೆ:–** ಈ ಉಪಪ್ರಕರಣದ ಉದ್ದೇಶಕ್ಕಾಗಿ,–

(i) "ಕೃಷಿಕ" ಎಂದರೆ, ಮಾಲೀಕನಾಗಿ ಭೂಮಿಯನ್ನು ಹೊಂದಿರುವ ವ್ಯಕ್ತಿ ಹಾಗೂ ಯಾರ ಮುಖ್ಯ ಆದಾಯವು ಸ್ವಂತ ಸಾಗುವಳಿ ಮಾಡುವುದರಿಂದ ಬರುತ್ತದೋ ಆ ವ್ಯಕ್ತಿ ಮತ್ತು ಇದು ಮುಖ್ಯವಾಗಿ ಕೃಷಿ ಭೂಮಿಗಳಲ್ಲಿ ದೈಹಿಕ ದುಡಿಮೆಯಿಂದ ತನ್ನ ಜೀವನ ನಿರ್ವಹಣೆ ಮಾಡುತ್ತಿರುವ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ.

(ii) "ಸ್ವಾತಂತ್ರ ಹೋರಾಟಗಾರ" ಎಂದರೆ, ಸರ್ಕಾರವು ಕಾಲ ಕಾಲಕ್ಕೆ ಹಾಗೆಂದು ಘೋಷಿಸುವ ಪ್ರವರ್ಗದ ವ್ಯಕ್ತಿ.

**7. ವಿಶ್ವವಿದ್ಯಾಲಯದ ಅಧಿಕಾರ ಮತ್ತು ಪ್ರಕಾರ್ಯಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ತೋಟಗಾರಿಕೆ ಮತ್ತು ಸಂಬಂಧಿತ ಇತರ ಕಲಿಕೆಯ ವಿಭಾಗಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯವು ಸೂಕ್ತ ಎಂದು ಭಾವಿಸಬಹುದಾದ ಶಿಕ್ಷಣವನ್ನು ಒದಗಿಸುವುದು;

(2) ತೋಟಗಾರಿಕೆ ಮತ್ತು ಸಂಬಂಧಿತ ಕಲಿಕೆಯ ವಿಭಾಗಗಳಲ್ಲಿ ಸಂಶೋಧನೆಯನ್ನು ನಡೆಸುವುದಕ್ಕೆ ಅವಕಾಶವನ್ನು ನೀಡುವುದು.

(3) ಸಂಶೋಧನೆಯಿಂದ ತಿಳಿದುಬಂದ ವಿಷಯಗಳನ್ನು ಮತ್ತು ತಾಂತ್ರಿಕ ಮಾಹಿತಿಗಳನ್ನು ವಿಸ್ತರಣಾ ಶಿಕ್ಷಣ ಕಾರ್ಯಕ್ರಮಗಳ ಮೂಲಕ ಪ್ರಸಾರ ಮಾಡಲು ಅವಕಾಶ ಕಲ್ಪಿಸುವುದು;

(4) ಯಾವುದೇ ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಈ ಉದ್ದೇಶಕ್ಕಾಗಿ ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅರೆಕಾಲಿಕ ವ್ಯಾಸಂಗ ಕ್ರಮ ಮತ್ತು / ಅಥವಾ ಸಂಶೋಧನೆಯು ಸೇರಿದಂತೆ ವಿಶ್ವವಿದ್ಯಾಲಯದಲ್ಲಿ ನಿಯಮಿಸಿದ ವ್ಯಾಸಂಗ ಕ್ರಮದಲ್ಲಿ ಅಧ್ಯಯನ ಮಾಡುವ ಅಥವಾ ಸಂಶೋಧನೆ ನಡೆಸುವ ಅಥವಾ ಅವೆರೆಡನ್ನೂ ಮಾಡುವ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೊಮಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಾಗಿ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸುವುದು ಹಾಗೂ ಪರೀಕ್ಷೆಗಳನ್ನು ನಡೆಸುವುದು ಮತ್ತು ಪದವಿ, ಡಿಪ್ಲೋಮಾ ಮತ್ತಿತರ ಶೈಕ್ಷಣಿಕ ಪ್ರಶಸ್ತಿ ನೀಡುವುದು;

(5) ನಿಯಮಿಸಬಹುದಾದಂಥ ಗೌರವ ಪದವಿಗಳು ಮತ್ತು ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(6) ರೈತರಿಗೆ, ಕ್ಷೇತ್ರ ಕೆಲಸಗಾರರಿಗೆ, ಗ್ರಾಮೀಣ ಮುಖಂಡರಿಗೆ ಮತ್ತು ವಿಶ್ವವಿದ್ಯಾಲಯದಲ್ಲಿ ಕ್ರಮಬದ್ಧ ವಿದ್ಯಾರ್ಥಿಗಳಾಗಿ ಭರ್ತಿಯಾಗಿರದ ಇತರ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುವುದು;

(7) 4ನೇ ಪ್ರಕರಣದಲ್ಲಿ ನಮೂದಿಸಿರುವ ಮಿತಿಗಳಿಗೊಳಪಟ್ಟು, ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳು ಮತ್ತು ಸಂಸ್ಥೆಗಳೊಡನೆ ಜೊತೆಗೂಡಿ ಕೆಲಸಮಾಡುವುದು;

(8) ತೋಟಗಾರಿಕೆ ಮತ್ತು ಸಂಬಂಧಿತ ವಿಜ್ಞಾನಗಳಿಗೆ ಸಂಬಂಧಿಸಿದ ಕಾಲೇಜುಗಳು ಮತ್ತು ಇತರ ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(9) ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಪ್ರಯೋಗಾಲಯಗಳು, ಗ್ರಂಥಾಲಯಗಳು, ಸಂಶೋಧನಾ ಕೇಂದ್ರಗಳು ಮತ್ತು ಸಂಸ್ಥೆಗಳು ಮತ್ತು ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(10) ಬೋಧನೆ, ಸಂಶೋಧನೆ ಮತ್ತು ವಿಸ್ತರಣಾ ಶಿಕ್ಷಣಕ್ಕಾಗಿ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಿಸುವುದು;

(11) ಆಡಳಿತಾತ್ಮಕವಾದ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವುದು;

(12) ಶಾಸನಗಳನ್ವಯ ಫೆಲೋಶಿಪ್, ವಿದ್ಯಾರ್ಥಿವೇತನಗಳು, ಸ್ಟೈಪೆಂಡುಗಳು ಮತ್ತು ಬಹುಮಾನಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(13) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಿವಾಸ ಗೃಹಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು;

(14) ನಿಯಮಿಸಲಾದಂಥ ಫೀಜು ಮತ್ತು ಇತರೆ ಚಾರ್ಜುಗಳನ್ನು ನಿಗದಿಪಡಿಸುವುದು, ಕೋರುವುದು ಮತ್ತು ಸ್ವೀಕರಿಸುವುದು;

(15) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸ, ನಡತೆ ಮತ್ತು ಶಿಸ್ತನ್ನು ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಿಸುವುದು ಹಾಗೂ ಅವರ ಆರೋಗ್ಯ ಮತ್ತು ಕ್ಷೇಮಾಭಿವೃದ್ಧಿಯನ್ನು ವರ್ಧಿಸುವುದಕ್ಕಾಗಿ ಏರ್ಪಾಡುಗಳನ್ನು ಮಾಡುವುದು;

(16) ವಿದೇಶಗಳಿಂದ ಮತ್ತು ದೇಶದ ಒಳಗಿನಿಂದ ವಂತಿಗೆಗಳನ್ನು ಸ್ವೀಕರಿಸುವುದು:

ಪರಂತು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದ ಹೊರತು ವಿಶ್ವವಿದ್ಯಾಲಯವು ವಿದೇಶದಿಂದ, ವಿದೇಶಿ ಪ್ರತಿಷ್ಠಾನಗಳು ಮತ್ತು ಅಂಥ ದೇಶದ ಯಾವುದೇ ವ್ಯಕ್ತಿಯಿಂದ ವಂತಿಗೆಗಳನ್ನು ಸ್ವೀಕರಿಸತಕ್ಕದ್ದಲ್ಲ.

(17) ಭಾರತದ ಹೊರಗೆ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಿಗೆ ತನ್ನ ವಿಶೇಷಾಧಿಕಾರಕ್ಕೆ ಪ್ರವೇಶಾವಕಾಶವನ್ನು ನೀಡಲು ವಿಶ್ವವಿದ್ಯಾಲಯಕ್ಕೆ ಅನುಮತಿಸುವುದು;

(18) ವಿವಿಧ ಶಾಸನಗಳಡಿಯಲ್ಲಿ ನಿರ್ಧರಿಸಿದಂತೆ ತೋಟಗಾರಿಕೆ ಮತ್ತು ಸಂಬಂಧಿತ ವಿಜ್ಞಾನಗಳಲ್ಲಿ ಕಲಿಕೆಯನ್ನು ನಡೆಸಲು ಖಾಸಗಿ ತೋಟಗಾರಿಕೆ ಸಂಸ್ಥೆಗಳಿಗೆ ಸಂಯೋಜನೆ ನೀಡುವುದು.

(19) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳ ಪುರೋಭಿವೃದ್ಧಿಗೆ ಅಗತ್ಯವಾಗಬಹುದಾದ ಎಲ್ಲಾ ಚಟುವಟಿಕೆಗಳು ಮತ್ತು ಕಾರ್ಯಗಳನ್ನು ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಇಲ್ಲದಿರಲಿ ಮಾಡುವುದು:

**8. ವಿಶ್ವವಿದ್ಯಾಲಯದ ಕೆಲವು ಕಾಲೇಜುಗಳ, ಸಂಸ್ಥೆಗಳ ಮತ್ತು ನೌಕರರ ವರ್ಗಾವಣೆ.**-(1) ಕರ್ನಾಟಕ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ 1963ರಲ್ಲಿ (1963ರ ಕರ್ನಾಟಕ ಅಧಿನಿಯಮ 22) ಏನೇ ಇದ್ದರೂ ಅನುಸೂಚಿ – I ರಲ್ಲಿ ನಿರ್ದಿಷ್ಟಪಡಿಸಿದ ಕಾಲೇಜುಗಳು, ಸಂಶೋಧನಾ ಕೇಂದ್ರಗಳು, ತೋಟಗಾರಿಕೆ ಬೆಳೆಗಳ ಬಗ್ಗೆ ಅಖಿಲ ಭಾರತ ಸಮನ್ವಯ ಸಂಶೋಧನಾ ಯೋಜನೆಗಳು ಮತ್ತಿತರ ಸಂಸ್ಥೆಗಳು ಹಾಗೂ ಕೃಷಿ ಮತ್ತು ತೋಟಗಾರಿಕೆಯ ರಾಜ್ಯ ಸರ್ಕಾರದ ಇಲಾಖೆಗಳ ಫಾರಂಗಳು ಮತ್ತು ಅವಕ್ಕೆ ಲಗತ್ತಾದ ವಿದ್ಯಾರ್ಥಿ ನಿಲಯಗಳು ಹಾಗೂ ಇತರ ಕಟ್ಟಡಗಳು, ತಮ್ಮ ಪೀಠೋಪಕರಣ ಸಾಮಾಗ್ರಿಗಳು, ಗ್ರಂಥಾಲಯಗಳು, ಪುಸ್ತಕಗಳು, ಪ್ರಯೋಗಾಲಯಗಳು, ದಾಸ್ತಾನು ಮಳಿಗೆಗಳು, ಉಪಕರಣಗಳು, ಸಾಧನಗಳು, ಪರಿಕರಗಳು ಮತ್ತು ಸಲಕರಣೆಗಳ ಸಮೇತವಾಗಿ ಹಾಗೂ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಹಾಗೂ ರಾಜ್ಯ ಸರ್ಕಾರವು ಮಾಲೀಕತ್ವ ಹೊಂದಿದ್ದ ಮತ್ತು ನಿರ್ವಹಿಸುತ್ತಿದ್ದ ಚರ ಮತ್ತು ಸ್ಥಿರ ಸ್ವತ್ತುಗಳೆರಡು ಸೇರಿದಂತೆ ಇತರ ಎಲ್ಲಾ ಸ್ವತ್ತುಗಳು, ಆಸ್ತಿಗಳು, ಹೊಣೆಗಾರಿಕೆಗಳು ಮತ್ತು ದಾಯಿತ್ವಗಳ ಸಹಿತವಾಗಿ ಅದರ ಎಲ್ಲಾ ಸ್ವತ್ತುಗಳು ಈ ವಿಶ್ವವಿದ್ಯಾಲಯಕ್ಕೆ ವರ್ಗಾಯಿತವಾಗತಕ್ಕದ್ದು ಮತ್ತು ಅದರಲ್ಲಿ ನಿಹಿತವಾಗತಕ್ಕದ್ದು.

(2) ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಸಂದರ್ಭಾನುಸಾರ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಯಾವುದೇ ಪರೀಕ್ಷೆಗಾಗಿ ವ್ಯಾಸಂಗ ಮಾಡುತ್ತಿರುವ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಒಂದು ಕಾಲೇಜಿನ ಅಥವಾ ಸಂಸ್ಥೆಯ ಯಾವೊಬ್ಬ ವಿದ್ಯಾರ್ಥಿಯು ಅದಕ್ಕಾಗಿ ಸಿದ್ದತೆ

ನಡೆಸಿದ ತನ್ನ ವ್ಯಾಸಂಗ ಕ್ರಮವನ್ನು ಪೂರ್ಣಗೊಳಿಸಲು ಅನುಮತಿ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂತಹ ವಿದ್ಯಾರ್ಥಿಗಳಿಗಾಗಿ ಪರೀಕ್ಷೆಗಳನ್ನು ನಡೆಸಲು ವ್ಯವಸ್ಥೆ ಮಾಡತಕ್ಕದ್ದು.

(3) ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವು ಪರೀಕ್ಷೆಗಳನ್ನು ನಡೆಸಿ ಫಲಿತಾಂಶಗಳನ್ನು ಘೋಷಿಸಿದ್ದರೆ ಮತ್ತು ಸಂಬಂಧಪಟ್ಟ ಪದವಿಯನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ವ್ಯಾಸಂಗ ಕ್ರಮದ ಅಗತ್ಯತೆಗಳನ್ನು ಪೂರೈಸಿದ್ದರೂ ಅಂತಹ ಪರೀಕ್ಷೆಯ ಫಲಿತಾಂಶಗಳನ್ನು ಘೋಷಿಸಿರದಿದ್ದರೆ, ಆಗ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಸಂದರ್ಭಾನುಸಾರ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳು ಫಲಿತಾಂಶವನ್ನು ಘೋಷಿಸತಕ್ಕದ್ದು ಮತ್ತು ಪದವಿಯನ್ನು ಪ್ರದಾನ ಮಾಡತಕ್ಕದ್ದು.

(4) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳಿಂದ ನಿಯೋಜಿತರಾಗಿದ್ದ, ಯಾವುದೇ ಕಾಲೇಜಿನಲ್ಲಿ, ಸಂಶೋಧನಾ ಕೇಂದ್ರದಲ್ಲಿ ಅಥವಾ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸಂಸ್ಥೆಗಳಲ್ಲಿ ಸೇವೆಸಲ್ಲಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಈ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು ಹಾಗೂ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವ ವರೆಗೆ ಹಾಗೇ ವರ್ಗಾವಣೆ ಮಾಡುವ ಬದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಮತ್ತು ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(5) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳಿಂದ ನಿಯೋಜಿತರಾಗಿದ್ದ ಯಾವುದೇ ಕಾಲೇಜಿನಲ್ಲಿ ಸಂಶೋಧನಾ ಕೇಂದ್ರದಲ್ಲಿ ಅಥವಾ (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರದ ಸಂಸ್ಥೆಗಳಲ್ಲಿ ಸೇವೆಸಲ್ಲಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಆತನ ಆಯ್ಕೆಯ ಮೇಲೆ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ಹುದ್ದೆಗಳ ಲಭ್ಯತೆಯ ಆಧಾರದ ಮೇಲೆ ವರ್ಗಾಯಿತನಾಗತಕ್ಕದ್ದು. ಅಂತಹ ವ್ಯಕ್ತಿಯ ಒಪ್ಪಿಗೆಯೊಡನೆ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವವರೆಗೆ, ಹಾಗೆ ವರ್ಗಾವಣೆ ಮಾಡುವುದಕ್ಕೆ ಮೊದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಹಾಗೂ ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(6) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ ಇವುಗಳ ಯಾವುದೇ ಕಾಲೇಜುಗಳಲ್ಲಿ ಸಂಶೋಧನಾ ಕೇಂದ್ರಗಳು/ಸಂಸ್ಥೆಗಳಲ್ಲಿ ಬೋಧಕೇತರ ಸಿಬ್ಬಂದಿಯನ್ನು ಹೊರತುಪಡಿಸಿ ಪ್ರತಿಯೊಬ್ಬ ವ್ಯಕ್ತಿಯು ನಿರ್ದಿಷ್ಟಪಡಿಸಿದ ದಿನಾಂಕದಿಂದ ಆತನ ಆಯ್ಕೆಯ ಮೇಲೆ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ಹುದ್ದೆಗಳ ಲಭ್ಯತೆಯ ಆಧಾರದ ಮೇಲೆ ವರ್ಗಾಯಿತನಾಗತಕ್ಕದ್ದು. ಅಂತಹ ವ್ಯಕ್ತಿಯ ಒಪ್ಪಿಗೆಯೊಡನೆ ಷರತ್ತುಗಳನ್ನು ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಾಡಿಸುವವರೆಗೆ, ಹಾಗೆ ವರ್ಗಾವಣೆ ಮಾಡುವುದಕ್ಕೆ ಮೊದಲು ಅನ್ವಯವಾಗುತ್ತಿದ್ದ ಸೇವಾ ಷರತ್ತುಗಳ ಮೇಲೆ ಆತನು ವರ್ಗಾಯಿತನಾಗತಕ್ಕದ್ದು ಹಾಗೂ ಅವೇ ಸೇವಾ ಷರತ್ತುಗಳು ಅನ್ವಯಿಸುವುದು ಮುಂದುವರೆಯತಕ್ಕದ್ದು.

(7) ಕೃಷಿ ಮತ್ತು ಸಂಬಂಧಿಸಿದ ವಿಜ್ಞಾನಗಳ ಯಾವೊಬ್ಬ ಅಧ್ಯಾಪಕ ಮತ್ತು ಬೋಧಕೇತರ ವ್ಯಕ್ತಿಯು ತನ್ನ ಮಾತೃ ವಿಶ್ವವಿದ್ಯಾಲಯದಲ್ಲೇ ಉಳಿದು ಕೊಳ್ಳುವ ಇಚ್ಛೆಯನ್ನು ವ್ಯಕ್ತಪಡಿಸಿದರೆ ಮೂರು ವರ್ಷಗಳ ತರುವಾಯ ಮಾತ್ರವೇ ಅವರನ್ನು ತೋಟಗಾರಿಕೆ ವಿಶ್ವವಿದ್ಯಾಲಯ ಮತ್ತು ಮಾತೃ ವಿಶ್ವವಿದ್ಯಾಲಯ ಈ ಎರಡೂ ವಿಶ್ವವಿದ್ಯಾಲಯಗಳ ಕುಲಪತಿಗಳ ಪರಸ್ಪರ ಒಪ್ಪಿಗೆಯ ಮೇಲೆ ಹೊಸ ವಿಶ್ವವಿದ್ಯಾಲಯಕ್ಕೆ ವರ್ಗಾವಣೆ ಮಾಡತಕ್ಕದ್ದು:

ಪರಂತು, ರಾಜ್ಯ ಸರ್ಕಾರದಿಂದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡಕ್ಕೆ ಪ್ರತಿನಿಯೋಜಿಸಲಾದ ಯಾವ ವ್ಯಕ್ತಿಯನ್ನೂ ರಾಜ್ಯ ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದಲ್ಲ:

ಮತ್ತು ಪರಂತು, ರಾಜ್ಯ ಸರ್ಕಾರವು ನಿಯೋಜಿಸಿದ ಆದರೆ ಅನುಸೂಚಿಯಲ್ಲಿ ಹೇಳಿದ ಕಾಲೇಜುಗಳಲ್ಲಿ, ಸಂಶೋಧನಾ ಕೇಂದ್ರಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಯಾವೊಬ್ಬ ವ್ಯಕ್ತಿಯನ್ನು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸತಕ್ಕದ್ದು. ಆತನ ನಿಯೋಜನೆಯ ದರ್ಜೆ ಬಗ್ಗೆ ರಾಜ್ಯ ಸರ್ಕಾರವು ತೀರ್ಮಾನವನ್ನು ಕೈಗೊಂಡ ಹೊರತು ಮತ್ತು ಆಲ್ಲಿಯವರೆಗೆ ಅವನು ಯಾವ ವೃಂದ ಮತ್ತು ನೇಮಕಾತಿ ನಿಯಮಗಳಡಿಯಲ್ಲಿ ನೇಮಕವಾಗಿರುವನ್ನೋ ಅವೇ ನಿಯಮಗಳಿಗೆ ಒಳಪಟ್ಟಿರುವುದು ಮುಂದುವರಿಯತಕ್ಕದ್ದು.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 12) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಭತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 95ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ (1964ರ ಕರ್ನಾಟಕ ಅಧಿನಿಯಮ 12) 95ನೇ ಪ್ರಕರಣದ (2)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಬೇಸಾಯದ ಬಳಕೆಗಾಗಿ ತೆರಿಗೆ ನಿರ್ಧರಿಸಲಾದ ಅಥವಾ ಹಿಡುವಳಿ ಹೊಂದಿರುವ ಭೂಮಿಯ ಯಾವುದೇ ಅಧಿಭೋಗದಾರನು ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು (2)ನೇ ಉಪ–ಪ್ರಕರಣದ ಅಡಿಯಲ್ಲಿ ಜಿಲ್ಲಾಧಿಕಾರಿಯ ಅನುಮತಿಯನ್ನು ಪಡೆಯದೇ ಆ ಭೂಮಿಯನ್ನು ಅಥವಾ ಅದರ ಒಂದು ಭಾಗವನ್ನು ಯಾವುದೇ ನಿವಾಸ, ಕೈಗಾರಿಕೆ ಅಥವಾ ವಾಣಿಜ್ಯ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿರುವ ಸಂದರ್ಭದಲ್ಲಿ ಮತ್ತು ಅಂಥ ಬದಲಿ ಉಪಯೋಗವನ್ನು ಸಕ್ರಮಗೊಳಿಸಲು ಅಪೇಕ್ಷಿಸಿದಲ್ಲಿ ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ನಿಯಮಿಸಬಹುದಾದಂಥ ನಮೂನೆಯಲ್ಲಿ, ಅಂಥ ಶುಲ್ಕ ಮತ್ತು ದಂಡದೊಡನೆ ಜಿಲ್ಲಾಧಿಕಾರಿಯವರಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಜಿಲ್ಲಾಧಿಕಾರಿಯು ಈ ಅಧಿನಿಯಮದಲ್ಲಿ ಏನೇ ಇದ್ದರೂ ಆದರೆ ಪ್ರಸ್ತುತ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳಿಗೆ ಒಳಪಟ್ಟು ಮತ್ತು ನಿಯಮಿಸಲಾದಂಥ ಷರತ್ತುಗಳಿಗೊಳಪಟ್ಟು ಹಾಗೂ ಅಂಥ ರೀತಿಯಲ್ಲಿ ತಾನು ಅವಶ್ಯವೆಂದು ಅಗತ್ಯಪಡಿಸಲಾದಂಥ ಸಾಕ್ಷ್ಯಗಳನ್ನು ಮಂಡಿಸಿದ ತರುವಾಯ ಮತ್ತು ವಿಚಾರಣೆ ನಡೆಸಿದ ನಂತರ ಅಂಥ ಭೂಮಿಯು ಈ ಕೆಳಕಂಡಂತೆ ಇದ್ದ ಸಂದರ್ಭದಲ್ಲಿ ಹೊರತುಪಡಿಸಿ, ಎಂದರೆ ಆ ಭೂಮಿಯು,–

(i) ನೈಸರ್ಗಿಕ ನೀರುಗಾಲುವೆಗಳು, ಅಥವಾ ಕಣಿವೆ ಹಾದಿಗೆ ಅಡ್ಡಲಾಗಿ ಇದ್ದಾಗ,

(ii) ರಾಜ್ಯ ಸರ್ಕಾರಕ್ಕೆ ಅಥವಾ ರಾಜ್ಯ ಸರ್ಕಾರವು ಮಾಲೀಕತ್ವ ಅಥವಾ ನಿಯಂತ್ರಣ ಹೊಂದಿರುವ ಒಂದು ಪ್ರಾಧಿಕಾರಕ್ಕೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಸೇರಿದಾಗ,

(iii) ಪ್ರಸ್ತುತ ಇರುವ ಅಥವಾ ಉದ್ದೇಶಿತ ರಸ್ತೆಗಳು, ಒಳ ಅಥವಾ ಹೊರ ವರ್ತುಲ ರಸ್ತೆಗಳ, ರಾಷ್ಟ್ರೀಯ ಹೆದ್ದಾರಿಗಳು, ವರ್ತುಲ ರಸ್ತೆಗಳ ಮೇಲಿನ ಬೈಪಾಸುಗಳೂ ಸೇರಿದಂತೆ ರಸ್ತೆಗಳ ಅಗಲೀಕರಣಕ್ಕೆ ಪ್ರಸ್ತಾಪಿಸಲಾದ ಭೂಮಿ ಅಥವಾ ರೈಲ್ವೆ ಲೈನ್‌ಗಳು, ಟ್ರಾಮ್‌ವೇಗಳು, ಸಮೂಹ ತ್ವರಿತ ಸಾರಿಗೆ ವ್ಯವಸ್ಥೆ ಯೋಜನೆಗಳು, ಸಂಪರ್ಕಗಳು ಮತ್ತಿತರ ನಾಗರೀಕ ಸೌಲಭ್ಯಗಳು ಅಥವಾ ಸಾರ್ವಜನಿಕ ಸೌಲಭ್ಯಗಳಿಗೆ ಅಡ್ಡಲಾಗಿ ಬರುತ್ತಿದ್ದಾಗ,

(iv) ಅರಣ್ಯ ಭೂಮಿಯಾಗಿದ್ದಾಗ,

(v) ಬೇರೊಬ್ಬ ವ್ಯಕ್ತಿಗೆ ಸೇರಿದ್ದು, ಅರ್ಜಿದಾರನು ಅದರ ಮೇಲೆ ಯಾವುದೇ ಹಕ್ಕನ್ನು ಹೊಂದಿರದಿದ್ದಾಗ,

(vi) ಅದನ್ನು ಉದ್ಯಾನವನಗಳು, ಆಟದ ಮೈದಾನಗಳು, ಬಯಲು ಜಾಗವಾಗಿ ಅಥವಾ ಯಾವುದೇ ನಾಗರೀಕ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಮೀಸಲಿರಿಸಿದ್ದಾಗ,

(vii) ಅಥವಾ ಕಟ್ಟಡವು ನೆರೆಯವರ ಸ್ವತ್ತಿಗೆ, ಮಳೆನೀರಿನ ಚರಂಡಿಗಳು, ಕೆರೆಅಂಗಳಗಳು, ನದಿಯ ಪಾತ್ರಗಳು, ಅಥವಾ ನದಿತಳಗಳು ಹಾಗೂ ಕಾಲುವೆಗಳಿಗೆ ಒತ್ತಿಕೊಂಡಿದ್ದಾಗ ಅಥವಾ ಹೈಟೆನ್ಷನ್ ವಿದ್ಯುತ್ ಲೈನುಗಳ ಅಡಿಯಲ್ಲಿ ಬರುತ್ತಿದ್ದಾಗ,

(viii) ಪಾರಂಪರಿಕ ಸ್ಮಾರಕಗಳು, ವಿಮಾನ ನಿಲ್ದಾಣಗಳು ಅಥವಾ ರಕ್ಷಣಾ ನಿಯಮಗಳ ವಲಯ ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಎತ್ತರಗಳ ನಿರ್ಬಂಧಗಳಿಗೆ ವಿರುದ್ಧವಾಗಿ ಅದರ ಬಳಕೆ ಇದ್ದಾಗ,

(ix) ಹೈಟೆನ್ಷನ್ ಲೈನುಗಳಿಂದ ಎಷ್ಟು ದೂರು ಇರಬೇಕು ಎಂಬ ನಿರ್ಭಂದಕ್ಕೆ ಅಥವಾ ಅಗ್ನಿ ಆಕಸ್ಮಿಕ ರಕ್ಷಣಾ ಕ್ರಮಗಳಿಗೆ ಅನುಗುಣವಾಗಿ ಇರದಿದ್ದಾಗ,

(x) ಭಾರತ ಸರ್ಕಾರದ ಪರಿಸರ ಮತ್ತು ಅರಣ್ಯ ಮಂತ್ರಾಲಯದ ಕರಾವಳಿ ವಲಯ ವಿನಿಯಮಗಳ ಪ್ರದೇಶದೊಳಗಡೆ ಇದ್ದಾಗ,

(xi) ಅಥವಾ ಅಭಿವೃದ್ಧಿಯು ಸರಿಹೊಂದದ ವಲಯದಲ್ಲಿ ಇದ್ದು ವಿಶೇಷ ಅಥವಾ ಅನಿಯಮಿತ ಕೈಗಾರಿಕೆಯಾಗಿದ್ದು, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯು "ಕೆಂಪು" ಪಟ್ಟಿಯಲ್ಲಿ ಪ್ರವರ್ಗಿಸಿದ ಕೈಗಾರಿಕೆಯಾಗಿದ್ದಾಗ ಸರಿ ಹೊಂದುವ ವಲಯದೊಳಗೆ ಇದ್ದರೂ ಸಹ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿಯೊಂದಿಗೆ ಮಾತ್ರ ಅದನ್ನು ಸಕ್ರಮಗೊಳಿಸತಕ್ಕದ್ದು;

(xii) ಭೂಮಿಯ ಬಳಕೆಯ ವಿಧಾನವನ್ನು ಬದಲಾಯಿಸಿರುವ ಸಂಬಂಧದಲ್ಲಿ ಅಕ್ರಮ-ಸಕ್ರಮಗೊಳಿಸುವುದನ್ನು ಕರ್ನಾಟಕ ನಗರ, ಪಟ್ಟಣ ಯೋಜನೆಗಳ ಅಧಿನಿಯಮ 1961ರ 14ಎ ಪ್ರಕರಣದ ಅನುಸಾರವಾಗಿ ಸಕ್ರಮಗೊಳಿಸತಕ್ಕದ್ದು.

(xiii) ಅಥವಾ ಎರಡಕ್ಕಿಂತ ಹೆಚ್ಚು ಮಹಡಿಗಳನ್ನು ಹೊಂದಿರುವ ಯಾವುದೇ ಕಟ್ಟಡದ ಸಂಬಂಧದಲ್ಲಿ ಅಭಿವೃದ್ಧಿಯನ್ನು,-

(ಎ) ಅಂಥ ಕಟ್ಟಡ ಗಟ್ಟಿಯಾಗಿದೆ ಎಂಬ ಬಗ್ಗೆ ರಚನಾ ಅಭಿಯಂತರರು ನೀಡಿದ ಪ್ರಮಾಣ ಪತ್ರವನ್ನು ಮಂಡಿಸಿದ,

(ಬಿ) ಅಗ್ನಿಶಾಮಕ ಇಲಾಖೆಯಿಂದ ನಿರಾಪೇಕ್ಷಣ ಪ್ರಮಾಣ ಪತ್ರವನ್ನು ಮಂಡಿಸಿದ,

-ಹೊರತು ಸಕ್ರಮಗೊಳಿಸತಕ್ಕದ್ದಲ್ಲ.

(xiv) ಅಥವಾ ಅನುಮೋದಿತ ಮಾಸ್ಟರ್ ಪ್ಲಾನಿನ ಕೃಷಿ ವಲಯದಲ್ಲಿ ಅಥವಾ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಅಡಿಯಲ್ಲಿ ಹಸಿರು ಪ್ರದೇಶ ಎಂದು ಘೋಷಿಸಿದ ಪ್ರದೇಶದಲ್ಲಿ ಅಕ್ರಮವಾಗಿ ಮಾಡಿದ ಅಭಿವೃದ್ಧಿ ಅಥವಾ ರಚನೆಯಾಗಿದ್ದಾಗ, ಹಾಗೂ

(xv) ನಿಯಮಿಸಲಾದ ಯಾವುದೇ ಇತರ ನಿಷೇಧಗಳಲ್ಲಿ ಅದು ಒಳಗೊಂಡಿದ್ದಾಗ,

- ಹೊರತುಪಡಿಸಿ ಅದನ್ನು ಸಕ್ರಮಗೊಳಿಸಬಹುದು ಅಥವಾ ಸಕ್ರಮಗೊಳಿಸಲು ನಿರಾಕರಿಸಬಹುದು:

(2ಎಎ) ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು ಭೂ ಬಳಕೆಯ ಬದಲಾವಣೆ ಅಥವಾ ವ್ಯತ್ಯಾಸವನ್ನು ಮಾಡಲಾಗಿದೆ ಎಂಬುದನ್ನು ರುಜುವಾತು ಪಡಿಸುವ ಹೊಣೆಗಾರಿಕೆಯು ಅಂಥ ಅನಧಿಕೃತ ವ್ಯತ್ಯಾಸ ಅಥವಾ ಭೂಮಿಯ ಬಳಕೆಯ ಬದಲಾವಣೆಯನ್ನು ಸಕ್ರಮಗೊಳಿಸಬೇಕೆಂದು ಕೋರುವ ಅರ್ಜಿದಾರನ ಮೇಲೆ ಇರತಕ್ಕದ್ದು.

(2ಎಎಎ) ಅಂಥ ವ್ಯತ್ಯಾಸ ಅಥವಾ ಭೂ ಬಳಕೆಯ ಬದಲಾವಣೆಯನ್ನು ಸಕ್ರಮಗೊಳಿಸದಿದ್ದ ಸಂದರ್ಭದಲ್ಲಿ ಅಥವಾ ಅಧಿಭೋಗದಾರನು (2ಎ) ಉಪ-ಪ್ರಕರಣದಲ್ಲಿ ನಿರ್ದಿಷ್ಟಗೊಳಿಸಿದ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸದಿದ್ದರೆ, ಅಂಥ ಕಟ್ಟಡವು ಕೆಡಹುವುದಕ್ಕೆ ಅಥವಾ ಭೂಮಿಯು ಅದನ್ನು ಈ ಮೊದಲು ಮಾಡುತ್ತಿದ್ದ ಬಳಕೆಗೆ ಮತ್ತೆ ತರುವುದಕ್ಕೆ ಗುರಿಯಾಗತಕ್ಕದ್ದು. ಮತ್ತು ಈ ಸಂಬಂಧ ಉಂಟಾದ ವೆಚ್ಚಗಳನ್ನು ಅಂಥ ವ್ಯಕ್ತಿಯಿಂದ ಭೂ ಕಂದಾಯದ ಬಾಕಿಗಳಂತೆ ವಸೂಲಿ ಮಾಡತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಅನಧಿಕೃತ ಬಡಾವಣೆಗಳಲ್ಲಿನ ನಿವೇಶನಗಳ ಹಾಗೂ ಅನುಮೋದಿತ ಆದರೆ ಅಭಿವೃದ್ಧಿ ಹೊಂದದ ಬಡಾವಣೆಗಳಲ್ಲಿನ ನಿವೇಶನಗಳ ವಿಶೇಷವಾಗಿ ಬೆಂಗಳೂರು, ಹಾಗೂ ರಾಜ್ಯದ ಇತರ ನಗರಸಭಾ ಪ್ರದೇಶಗಳಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿರುವ ಅಂಥ ಭೂಮಿಗಳ ನೋಂದಣಿಯನ್ನು, ಬಡಾವಣೆಗಳು ಮತ್ತು ನಿವೇಶನಗಳು ಮತ್ತು ಪರಿವರ್ತನೆ ಹೊಂದದ ಕೃಷಿ ಭೂಮಿಯಲ್ಲಿದ್ದುದರಿಂದ ನಿಷೇಧಿಸಲಾಗಿತ್ತು. ನಿಷೇಧಿಸುವ ದಿನಾಂಕದವರೆಗೆ ಸುಮಾರು 3 ರಿಂದ 5 ಲಕ್ಷ ವ್ಯಕ್ತಿಗಳು ಅಂತಹ ನಿವೇಶನಗಳನ್ನು ಅನೌಪಚಾರಿಕವಾಗಿ ಖರೀದಿಸಿದ್ದು, ಹಾಗೂ ನೋಂದಣಿ ಇಲ್ಲದೆ ಅವುಗಳಲ್ಲಿ ಕಟ್ಟಡಗಳನ್ನು ನಿರ್ಮಿಸಿಕೊಂಡಿದ್ದಾರೆ. ಇದರಿಂದ ಅಂತಹ ಜನರಿಗೆ ಅನಗತ್ಯ ತೊಂದರೆ ಉಂಟಾಗುತ್ತಿದೆ. ಆದ್ದರಿಂದ ಸರ್ಕಾರವು

31.12.2008ರ ಮೊದಲು ಅಭಿವೃದ್ಧಿ ಹೊಂದಿದ ಅಂಥ ಎಲ್ಲಾ ನಿವೇಶನಗಳು ಹಾಗೂ ಬಡಾವಣೆಗಳನ್ನು ಕೆಲವು ಸಕಾರಣವಾದ ಷರತ್ತುಗಳಿಗೊಳಪಟ್ಟು ಒಂದು ಸಲದ ಸಮಗ್ರ ಯೋಜನೆಯಾಗಿ ಸಕ್ರಮಗೊಳಿಸಲು ಉದ್ದೇಶಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಜಿ. ಕರುಣಾಕರ ರೆಡ್ಡಿ**
ಕಂದಾಯ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE KARNATAKA LAND REVENUE (SECOND AMENDMENT) BILL, 2009**

**(L.A. Bill No. 16 of 2009)**

A Bill further to amend the Karnataka Land Revenue Act, 1964.

Whereas, it is expedient further to amend the Karnataka Land Revenue Act, 1964 (Karnataka Act 12 of 1964), for the purposes hereinafter appearing;

Be it enacted by the Karnataka State Legislature in the Fifty-ninth year of the Republic of India, as follows:-

**1. Short title and commencement**.- (1) This Act may be called the Karnataka Land Revenue (Second Amendment) Act, 2009.

(2) It shall come into force at once.

**2. Amendment of section 95.-** After sub-section (2) of section 95 of the Karnataka Land Revenue Act, 1964 (Karnataka Act 12 of 1964), the following shall be inserted, namely:-

"(2A) Where any occupant of land assessed or held for the purpose of agriculture has diverted such land or part thereof to any residential, industrial or commercial or any other purpose without obtaining the permission of Deputy Commissioner under sub-section (2), prior to the date of commencement of the Karnataka Land Revenue (Second Amendment) Act, 2009 and desirous to get such diversion be regularised, shall, apply within the period of one year from the date of commencement of the Karnataka Land Revenue (Second Amendment) Act, 2009 in such form, alongwith such fee and penalty, as may be prescribed, to the Deputy Commissioner. On receipt of such application, the Deputy Commissioner may, notwithstanding anything contained in this Act, but subject to the provisions of any other law for the time being in force and subject to such conditions and in such manner as may be prescribed, on production of such evidence as he may require it to be necessary and after an enquiry, regularise or refuse to regularize except where such land,-

(i) lies in the line of natural drains or course of valley;

(ii) belongs to the State Government or an authority owned or controlled by the State Government or any local Authority;

(iii) coming in the way of existing or proposed roads, inner or outer ring roads, national high ways, by pass over ring roads including those proposed for widening and railway lines, tram ways, mass rapid transit system projects, communications and other civic facilities or public utilities;

(iv) is a forest land;

(v) belonging to another person over which the applicant has no title;

(vi) is reserved for parks, play grounds, open places or for providing any civic amenities;

(vii) or building is abutting to neighbouring property, storm water drains, tank bed areas, river course or beds and canals or below the high tension electric line;

(viii) use is against height restrictions specified in zoning regulations for heritage monuments, aerodrums and Defence Regulations;

(ix) not conforms to any clearance from high-tension lines or fire protection measures;

(x) is in the area covered by the Coastal Zone Regulations of the Ministry Environment and Forest, Government of India;

(xi) or development being a special and hazardous industry or an industry categorised as "RED" by the Karnataka Pollution Control Board in a non-conforming zone. Even in a conforming zone, it shall be regularised only with the clearance from the Karnataka Pollution Control Board;

(xii) regularisation of violation in respect of change of land use shall be made as far as may be in accordance with section 14A of the Karnataka Town and Country Planning Act, 1961;

(xiii) or development in respect of any building having more than two floors shall be regularised unless,-

(a) a certificate from a Structural Engineer is produced regarding the structural stability of such building;

(b) a No Objection Certificate is obtained from the Fire Force Department.

(xiv) or unauthorised development or construction made in agricultural zone of approved Master Plan or green belt area declared under Karnataka Land Revenue Act, 1964; and

(xv) is covered under any other prohibition as may be prescribed:

(2AA) Burden of proving that the diversion or change of land use was made prior to the date of commencement of the Karnataka Land Revenue (Second Amendment) Act, 2009 shall lie on the applicant who seeks regularisation of such unauthorised diversion or change of land use.

(2AAA) All such diversions or change of land use which are not regularised or where applicant does not apply within the time specified in sub-section (2A) shall be liable to be demolished or brought back to their earlier use and expenses incurred thereon shall be collected from such person as arrears of land revenue."

## STATEMENT OF OBJECTS AND REASONS

The Registration of revenue sites in un-authorized layouts and sites in the approved but undeveloped layouts particularly in and around Bangalore and other City Corporations in the State was banned as the layouts and sites were in agricultural land without conversion. There are about 3 to 5 lakh persons who have purchased informally such sites and built houses thereupon without registration until the date of prohibition. This has resulted in undue hardship to such persons. Therefore, Government has proposed to regularize all such sites and layouts developed prior to 31-12-2008 as a one time comprehensive scheme subject to certain reasonable conditions.

Hence, this Bill.

## FINANCIAL MEMORANDUM

There is not extra expenditure involved in the proposed measure.

**G. KARUNAKARA REDDY**
Minister for Revenue

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜನವರಿ ೨೩, ೨೦೦೯ (ಮಾಘ ೩, ಶಕ ವರ್ಷ ೧೯೩೦) | ನಂ. ೪೨ |
|---|---|---|

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 84 SSC 2007, Bangalore, Dated : 19th January, 2009**

In exercise of the powers conferred by section 18 of the Karnataka Public Service Commission (Conduct of Business and Additional Functions) Act 1959 (Karnataka Act 20 of 1959), the Government of Karnataka in consultation with the Karnataka Public Service Commission as required under said section hereby, makes the following rules further to amend the Karnataka Public Service Commission (Conduct of Service Examination) Rules 1965, namely :-

1. **Title and Commencement :-** (1) These rules may be called the Karnataka Public Service Commission (Conduct of Service Examination) (Amendment) Rules, 2008.

(2) They shall come into force from the date of their publication in the Official Gazette.

**2. Amendment of rule 6 :-** In the Karnataka Public Service Commission (Conduct of Service Examination) Rules, 1965, in rule 6, for sub-rule (1), the following shall be substituted, namely :-

(1) The fees payable for admission of a candidate for any examination shall be such as the Commission may with the approval of the Government determine.

By order and in the name of the Governor of Karnataka,

**DEVARAJU**
Under Secretary to Government
Department of Personnel and Administrative Reforms
(Service Rules-1)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶನಿವಾರ, ಜನವರಿ ೨೪, ೨೦೦೯ (ಮಾಘ ೪, ಶಕ ವರ್ಷ ೧೯೩೦) | ನಂ. ೪೩ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಶಿಕ್ಷಣ ಸಚಿವಾಲಯ**

**ವಿಷಯ :** ರಾಜ್ಯದಲ್ಲಿ ಭಯೋತ್ಪಾದನೆ ವಿರೋಧಿ ಅಭಿಯಾನ ಸಮಿತಿ ರಚನೆ ಕುರಿತು.

**ಓದಲಾಗಿದೆ:** (1) ಮಾನ್ಯ ಉನ್ನತ ಶಿಕ್ಷಣ ಸಚಿವರ ಟಿಪ್ಪಣಿ ಸಂಖ್ಯೆ : ಉಶಿಸಕಾ : 1079:2008, ದಿನಾಂಕ : 08–12–2008.

(2) ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ದಿನಾಂಕ : 20–12–2008.

**ಪ್ರಸ್ತಾವನೆ :**

ಮೇಲೆ (2) ಓದಲಾದ ಸರ್ಕಾರದ ಆದೇಶದಲ್ಲಿ ಭಯೋತ್ಪಾದನೆ ವಿರುದ್ಧ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವ ಸಂಬಂಧ ರಾಜ್ಯ ಮತ್ತು ವಿಭಾಗದ ಮಟ್ಟದಲ್ಲಿ ಆದೇಶದ ಅನುಬಂಧ–I ಮತ್ತು ಅನುಬಂಧ–II ರಲ್ಲಿರುವಂತೆ ಭಯೋತ್ಪಾದನೆ ವಿರೋಧಿ ಅಭಿಯಾನ ಸಮಿತಿಗಳನ್ನು ರಚಿಸಿ ಆದೇಶಿಸಿದೆ. ದಿನಾಂಕ : 22–12–2008 ರಂದು ಸನ್ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಶಿಕ್ಷಣ ಇಲಾಖೆಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಸಮಿತಿಗೆ ರಾಜ್ಯ ಮತ್ತು ವಿಭಾಗ ಮಟ್ಟದಲ್ಲಿ ಅಧಿಕಾರಿ : ಸದಸ್ಯರುಗಳನ್ನು ನೇಮಕ ಮಾಡಲು ಮತ್ತು ರಾಜ್ಯ ಮತ್ತು ವಿಭಾಗ ಮಟ್ಟದ ಎಲ್ಲಾ ಅಧ್ಯಕ್ಷರು ಹಾಗೂ ಸದಸ್ಯರುಗಳ ಅಧಿಕಾರ ಮತ್ತು ಕಾರ್ಯವ್ಯಾಪ್ತಿ ನಿಗದಿಪಡಿಸಲು ತೀರ್ಮಾನಿಸಲಾಗಿದೆ. ಆದುದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ಬೆಂಗಳೂರು, ದಿನಾಂಕ : 29–12–2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ದಿನಾಂಕ : 20–12–2008ರ ಸರ್ಕಾರಿ ಆದೇಶಕ್ಕೆ ಮುಂದುವರೆದಂತೆ, ರಾಜ್ಯದಲ್ಲಿ ಭಯೋತ್ಪಾದನೆ ವಿರುದ್ಧ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವ ಸಂಬಂಧದಲ್ಲಿ ರಾಜ್ಯ ಮತ್ತು ವಿಭಾಗದ ಮಟ್ಟದ ಭಯೋತ್ಪಾದನೆ ವಿರೋಧಿ ಅಭಿಯಾನ ಸಮಿತಿಗೆ ಅನುಬಂಧ–III ಮತ್ತು IV ರಲ್ಲಿರುವಂತೆ ಅಧಿಕಾರಿಗಳನ್ನು ಸೇರ್ಪಡೆಗೊಳಿಸಿದೆ. ಅನುಬಂಧ–V ರಲ್ಲಿರುವಂತೆ ಅಧ್ಯಕ್ಷರು/ಸದಸ್ಯರುಗಳು ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಾಮಾನ್ಯ)

**ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ದಿನಾಂಕ : 29–12–2008ರ**

**ಅನುಬಂಧ – III**

**ರಾಜ್ಯ ಮಟ್ಟದ ಸಮಿತಿ – ಕರ್ನಾಟಕ**

1. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು
ಉನ್ನತ ಶಿಕ್ಷಣ ಇಲಾಖೆ
ಬಹುಮಹಡಿ ಕಟ್ಟಡ, ಬೆಂಗಳೂರು
2. ಸರ್ಕಾರದ ಕಾರ್ಯದರ್ಶಿಯವರು
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ
3. ಆರಕ್ಷಕ ಮಹಾನಿರ್ದೇಶಕರು (ಡಿ.ಜಿ.ಪಿ.)
ಬೆಂಗಳೂರು.
4. ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ
ಬೆಂಗಳೂರು

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಾಮಾನ್ಯ)

**ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ದಿನಾಂಕ : 29–12–2008 ರ**

**ಅನುಬಂಧ – IV**

**ವಿಭಾಗ ಮಟ್ಟದ ಅಧಿಕಾರಿ / ಸದಸ್ಯರುಗಳು**

1. ಎಲ್ಲಾ ಪ್ರಾದೇಶಿಕ ಆಯುಕ್ತರುಗಳು.
2. ಎಲ್ಲಾ ಡೆಪ್ಯೂಟಿ ಇನ್ಸ್‌ಪೆಕ್ಟರ್ ಆಫ್ ಜನರಲ್‌ಗಳು, (ಡಿ. ಐ. ಜಿ.)
3. ಎಲ್ಲಾ ವಿಶ್ವವಿದ್ಯಾಲಯಗಳ ಕುಲಸಚಿವರು
4. ಎಲ್ಲಾ ವಿಭಾಗಗಳ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಾಮಾನ್ಯ)

**ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಎಸ್‌ಟಿಬಿ 2008, ದಿನಾಂಕ : 29–12–2008ರ**

**ಅನುಬಂಧ – V**

**ಈ ಸಮಿತಿಯ ಅಧಿಕಾರಿ ಮತ್ತು ಅಧಿಕಾರೇತರ ಅಧ್ಯಕ್ಷರು ಮತ್ತು ಸದಸ್ಯರುಗಳ ಕರ್ತವ್ಯ ಹಾಗೂ ಜವಾಬ್ದಾರಿಗಳು :–**

1. ವಿಭಾಗ ಮಟ್ಟ ಹಾಗೂ ಜಿಲ್ಲಾ ಮಟ್ಟಗಳಲ್ಲಿ ಕ್ರಮವಾಗಿ ಪ್ರಾದೇಶಿಕ ಆಯುಕ್ತರು ಮತ್ತು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸುವುದು.
2. ಸಭೆಯ ಕಲಾಪಗಳ ಬಗ್ಗೆ ನಡವಳಿ ಸಿದ್ಧಪಡಿಸಿ ಸರ್ಕಾರದ ಅನುಮೋದನೆಗೆ ಕಳುಹಿಸುವುದು.
3. ವಿಭಾಗ ಮಟ್ಟದ ಸಮಿತಿಯ ಅಧಿಕಾರೇತರ ಅಧ್ಯಕ್ಷರು ಮತ್ತು ಸದಸ್ಯರುಗಳು ಸಂಬಂಧಪಟ್ಟ ಜಿಲ್ಲೆಗಳಲ್ಲಿ ವ್ಯಾಪಕ ಪ್ರವಾಸ ಕೈಗೊಂಡು ಸದರಿ ಕಾರ್ಯಕ್ರಮದ ಬಗ್ಗೆ ವಿದ್ಯಾರ್ಥಿಗಳಲ್ಲಿ ಜಾಗೃತಿ ಉಂಟು ಮಾಡುವುದು.
4. ಸದರಿ ಅಧ್ಯಕ್ಷರು / ಸದಸ್ಯರುಗಳು ಕಾಲೇಜು / ತಾಲ್ಲೂಕು ಜಿಲ್ಲೆ ಮತ್ತು ವಿಭಾಗ ಮಟ್ಟಗಳಲ್ಲಿ ವಿವಿಧ ಹಂತಗಳಲ್ಲಿ ಕಾರ್ಯಕ್ರಮ ಆಯೋಜಿಸಿ, ಸಂಘಟಿಸಿ ಯಶಸ್ವಿಗೊಳಿಸಲು ಸೂಕ್ತ ಸಲಹೆ ನೀಡುವುದು.
5. ಈ ಕಾರ್ಯಕ್ರಮ ನಿಮಿತ್ತ ಒದಗಿಸುವ ಆಯವ್ಯಯವನ್ನು ಕಟ್ಟುನಿಟ್ಟಾಗಿ ಆರ್ಥಿಕ ಮಿತವ್ಯಯ ಗಮನದಲ್ಲಿಟ್ಟು ಖರ್ಚು ಮಾಡುವುದು.

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಾಮಾನ್ಯ)

# ವಿಶೇಷ ಪತ್ರಿಕೆ

**ಭಾಗ – III**


| | |
|---|---|
| **ಬೆಂಗಳೂರು, ಮಂಗಳವಾರ, ಜನವರಿ ೨೭, ೨೦೦೯ (ಮಾಘ ೭, ಶಕ ವರ್ಷ ೧೯೩೦)** | **ನಂ. ೪೪** |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 3 ಹೆಚ್‌ಹೆಚ್‌ಎಲ್ 2009, ಬೆಂಗಳೂರು, ದಿನಾಂಕ 27ನೇ ಜನವರಿ, 2009**

**ಭಾರತದ ಮಾನ್ಯ ಮಾಜಿ ರಾಷ್ಟ್ರಪತಿಯವರಾದ ಶ್ರೀ ಆರ್. ವೆಂಕಟರಾಮನ್ ರವರು,** ದಿನಾಂಕ : 27.01.2009 ರಂದು ನಿಧನರಾದ ವಿಷಯವನ್ನು ರಾಜ್ಯ ಸರ್ಕಾರವು ತೀವ್ರ ಸಂತಾಪದಿಂದ ಈ ಮೂಲಕ ಪ್ರಕಟಿಸಿದೆ.

**ಸುಧಾಕರ ರಾವ್**
ಸರ್ಕಾರದ ಮುಖ್ಯ ಕಾರ್ಯದರ್ಶಿ
ಕರ್ನಾಟಕ ಸರ್ಕಾರ

**DEPARTMENT OF PERSONNEL AND ADMINISTRATIVE REFORMS**

**NOTIFICATION**

**No. DPAR 3 HHL 2009, Bangalore, Dated : 27th January 2009**

THE GOVERNMENT OF KARNATAKA ANNOUNCE WITH MOST PROFOUND REGRET THE DEATH OF **SHRI R. VENKATARAMAN, FORMER PRESIDENT OF INDIA** ON 27TH JANUARY, 2009.

**SUDHAKAR RAO**
CHIEF SECRETARY TO GOVERNMENT
GOVERNMENT OF KARNATAKA

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೭, ೨೦೦೯ (ಮಾಘ ೭, ಶಕ ವರ್ಷ ೧೯೩೦) | ನಂ. ೪೫ |
|---|---|---|


**REVENUE SECRETARIAT**

**NOTIFICATION**

**No. RD 299 BSC 2006, Bangalore, Dated : 22nd January, 2009**

The Draft of the following rules further to amend the Karnataka General Services (Revenue Subordinate Branch) (Cadre and Recruitment) Rules 1977 which the Government of Karnataka proposes to make in exercise of the powers conferred by sub-section (1) of section 3 read with section 8 of Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section (3) of said Act for the information of persons likely to be affected thereby and notice is hereby given that the said draft will be taken into consideration after seven days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Revenue Department, M.S.Building, Dr.Ambedker Veedhi, Bangalore-560 001. If no objections are received, Government will proceed with publication of C and R Rules.

**DRAFT RULES**

**1. TITLE AND COMMENCEMENT :**

(1) These rules may be called the Karnataka General Services (Revenue Subordinate Branch) (Cadre and Recruitment (Amendment) Rules 2008.

(2) They shall come into force from the date of their publication in the Official Gazettee.

**2. AMENDMENT OF SCHEDULE:** In the schedule to Karnataka General services (Revenue Subordinate Branch) (Cadre and Recruitment) Rules 1977, in the entries relating to the category of posts of Village Accountant for the entries in column (2) and (3) , the following shall be substituted , namely;-

| | | |
|---|---|---|
| | **By Direct Recruitment:** Direct Recruitment be made by Selection Authority, consisting of the following namely:-<br><br>**SELECTION AUTHORITY:-**<br><br>**a) Chairman:** Deputy Commisssioner .<br><br>**b) Secretary:** Headquarters Assistant to the Deputy Commissioner.<br><br>**(c) Member:** District Social Welfare Officer.<br><br>The Selection Authority shall advertise the vacancies in the official Gazette specifying the number of vacancies to be filled and the classification of posts in accordance with the reservation of posts provided by or under any law or Government order for the time being in force, and invite applications from eligible candidates. Abstract of such advertisement shall also be published in two daily newspapers having wide circulation in the | **QUALIFICATION:-**<br><br>Must have passed Pre University Examination or any equivalent examination. |

| | | |
|---|---|---|
| | State of Karnataka of which one shall be in Kannada. Abstract of such advertisement shall also be notified on the Notice Board of the Office of the Deputy Commissioners, Assistant Commissioners and Tahasildars.<br><br>Application form shall be as specified by the Selection Authority and shall be annexed to the notification. The application shall be accompanied by such fee and the mode of payment of fee shall be as specified in the notification by the Selection Authority.<br><br>The notification shall indicate the age limit and the last date fixed for receipt of applications which shall not be less than thirty days from the date on which the notification inviting the application has been published in the official Gazette.<br><br>The Selection Authority shall, on the basis of percentage of total marks secured by the candidates in the qualifying examination and after taking into account the reservation of posts provided by or under any law or any order for the time being in force, prepare a select list in order of merit of candidates in each category. The number of candidates in the select list shall be equal to the number of vacancies notified. An additional list shall also be prepared in accordance with instruction in the G.O. No. DPAR 26 SBC 2002,dated 11.04.2003 as amended from time to time. The list of selected candidates shall be published in the official Gazette indicating the names of the candidates selected and a copy be sent to the appointing authority for taking further action. It shall also be published on the Notice Board of the Office of the Deputy Commissioner, Assistant Commissioner and Tahasildars. Abstract of such select list shall also be published in two daily newspapers having wide circulation in the State of Karnataka, of which one shall be in Kannada.<br><br>The Appointing Authority may appoint the candidates whose names are included in the select list in the order in which their names appear in the select list after satisfying itself on such enquiry as may be considered necessary that such candidates are suitable in all respects for such appointment. | |

| | | |
|---|---|---|
| | The inclusion of the names of the candidates in the final select list shall not confer any right of appointment.<br><br>If after issue of appointment order to the candidate, the candidate fails to report for duty within the stipulated period, that vacancy shall be filled by a candidate from the additional list. However, the number of the candidates to be appointed from the main list and additional list shall not exceed the number of vacancies notified.<br><br>**Training :** Every person appointed as a Village Accountant is required to undergo during the period of probation, a course of training for a period not exceeding six months and also pass tests as may be prescribed by the State Government. | |

**3. REPEAL :** The Karnataka General Services (Revenue Subordinate Branch) Village Accountants (Recruitment) Rules 1970 are hereby repealed.

By order and in the name of the Governor of Karnataka,
**Ramachandraiah**
Under Secretary to Government
Revenue Department
(Disaster Management & Services-B)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಜನವರಿ ೨೭, ೨೦೦೯ (ಮಾಘ ೭, ಶಕ ವರ್ಷ ೧೯೩೦) | ನಂ. ೪೬ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರಕ್ಕೆ ತಯಾರಿಸಿರುವ ಮಹಾಯೋಜನೆ 2021ನ್ನು (Master Plan) ಅಂತಿಮಗೊಳಿಸಿ ಆದೇಶಿಸುವ ಬಗ್ಗೆ (BIAAPA)

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ UDD 248 ಬೆಂರೂಪ್ರಾ 2003 ದಿ. 13.09.2004, ತಿದ್ದುಪಡಿ ಆದೇಶ ದಿನಾಂಕ: 17.09.2004.
2. ಅಧಿಸೂಚನೆ ಸಂಖ್ಯೆ: ನಅಇ 248 ಬೆಂರೂಪ್ರಾ 2003 ದಿ: 17.11.2004.
3. ಮಹಾನಗರ ಆಯುಕ್ತರು, BMRDA ಮತ್ತು ಅಧ್ಯಕ್ಷರು, BIAAPA ಇವರಿಂದ ಸ್ವೀಕರಿಸಿರುವ ಪತ್ರದ ಸಂಖ್ಯೆ: BIAAPA/ODP/87/2003–04 ದಿನಾಂಕ: 18.01.2006 ಮತ್ತು ದಿನಾಂಕ: 30.12.2006.
4. ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಇವರ ಪತ್ರದ ಸಂಖ್ಯೆ: BMRDA/BIAAPA/ Master Plan/2006–07 ದಿನಾಂಕ: 10.03.2008.
5. ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಇವರ ಪತ್ರದ ಸಂಖ್ಯೆ: BMRDA/BIAAPA/ Master Plan/2005–06 ದಿನಾಂಕ: 15/16–01–2009.

6. ಸರ್ಕಾರಿ ಪತ್ರ ಸಂಖ್ಯೆ: ನಅಇ 157 ಬಿಎಂಆರ್ 2005 ದಿನಾಂಕ: 22.06.2006, 25.05.2007, 09.04.2008, 11.11.2008 ಮತ್ತು 07.01.2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 13.09.2004ರ ತಿದ್ದುಪಡಿ ಆದೇಶ ದಿನಾಂಕ: 17.09.2004ರಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಸೆಕ್ಷನ್ 13(1)ರನ್ವಯ ಸರ್ಕಾರವು, ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪದೇಶ ಯೋಜನಾ ಪ್ರಾಧಿಕಾರಕ್ಕೆ ತಯಾರಿಸಿರುವ ತಾತ್ಕಾಲಿಕ ಮಹಾಯೋಜನೆಗೆ ಅನುಮೋದನೆಯನ್ನು ನೀಡಿ, ಸ್ಥೂಲಾಭಿವೃದ್ಧಿ ಯೋಜನೆಯನ್ನು (ODP) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ 1961ರ ಸೆಕ್ಷನ್ 13(1)ರನ್ವಯ ಮಾಹಿತಿಗೋಸ್ಕರ ಪ್ರಕಟಿಸಿ, ಸಾರ್ವಜನಿಕರಿಂದ ಅಭಿಪ್ರಾಯ ಮತ್ತು ಸಲಹೆಗಳನ್ನು 30 ದಿನಗಳೊಳಗಾಗಿ ಸಲ್ಲಿಸಲು ಕೋರಲಾಗಿತ್ತು. ನಂತರ ಉಲ್ಲೇಖ(2)ರ ಅಧಿಸೂಚನೆ ದಿನಾಂಕ: 17.11.2004ರಲ್ಲಿ ಸರ್ಕಾರವು ಆಕ್ಷೇಪಣೆ / ಸಲಹೆಗಳನ್ನು ಸಲ್ಲಿಸುವ ದಿನಾಂಕವನ್ನು 31.12.2004ರವರೆಗೂ ವಿಸ್ತರಿಸಿ ಆದೇಶಿಸಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 18.01.2006ರ ಪತ್ರದಲ್ಲಿ ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಮತ್ತು ಅಧ್ಯಕ್ಷರು ಬಿಐಎಪಿಎ ಇವರು ಉಲ್ಲೇಖ (1) ಮತ್ತು (2)ರ ಸರ್ಕಾರದ ಆದೇಶದನ್ವಯ ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರಕ್ಕೆ ತಯಾರಿಸಿರುವ ತಾತ್ಕಾಲಿಕ ಮಹಾಯೋಜನೆಯನ್ನು ದಿನಾಂಕ: 22.09.2004 ರಾಜ್ಯಪತ್ರದಲ್ಲಿ ಪ್ರಕಟಿಸಿ, ಸಾರ್ವಜನಿಕರಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಸ್ವೀಕರಿಸಲಾಗಿತ್ತೆಂದು, ಸದರಿ ಸ್ಥೂಲಾಭಿವೃದ್ಧಿ ಯೋಜನಾ ಬಗ್ಗೆ ಒಟ್ಟು 1816 ಆಕ್ಷೇಪಣೆಗಳು ಸ್ಥೂಲಾಭಿವೃದ್ಧಿ ಯೋಜನೆಯ ಬಗ್ಗೆ (ಈಗ ಮಹಾಯೋಜನೆ ಎಂದು ಕರೆಯಲಾಗುತ್ತದೆ) ಸ್ವೀಕರಿಸಿದ್ದು, ಸ್ವೀಕರಿಸಿರುವ ಆಕ್ಷೇಪಣೆಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿತ್ತು :–

(1) ಸ್ಥೂಲಾಭಿವೃದ್ಧಿ ಯೋಜನೆಯನ್ನು ತಾತ್ಕಾಲಿಕವಾಗಿ ಅನುಮೋದನೆ ನೀಡುವ ಮೊದಲು ಕೃಷಿಯೇತರ ಉದ್ದೇಶಕ್ಕಾಗಿ ಭೂಮಿಯನ್ನು ಪರಿವರ್ತಿಸಿರುವ ಅಥವಾ ಸಕ್ಷಮ ಪಾಧಿಕಾರದಿಂದ ಅನುಮೋದನೆಗೊಂಡಿರುವ ಅಥವಾ ನಿರಾಕ್ಷೇಪಣಾ ಪತ್ರ ಹೊರಡಿಸಿರುವ ಪ್ರಕರಣಗಳು (ಒಟ್ಟು 125 ಪ್ರಕರಣಗಳು).

(2) ಕೃಷಿಯೇತರ ಉದ್ದೇಶಕ್ಕಾಗಿ ಭೂಮಿ ಪರಿವರ್ತನೆಗೊಂಡಿಲ್ಲದಿರುವ ಪ್ರಕರಣಗಳು (ಒಟ್ಟು 1647 ಪ್ರಕರಣಗಳು).

(3) ಸ್ಥೂಲಾಭಿವೃದ್ಧಿ ಯೋಜನೆ ತಾತ್ಕಾಲಿಕ ಅನುಮೋದಿತವಾದ ನಂತರ ಮೊದಲು ಕೃಷಿಯೇತರ ಉದ್ದೇಶಕ್ಕಾಗಿ ಭೂ ಪರಿವರ್ತನೆಯಾಗಿರುವ ಪ್ರಕರಣಗಳು (ಒಟ್ಟು 44 ಪ್ರಕರಣಗಳು).

ಮುಂದುವರಿದು, ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಇವರು ಸ್ಥೂಲಾಭಿವೃದ್ಧಿ ಯೋಜನೆಯ ಬಗ್ಗೆ ಸ್ವೀಕರಿಸಿರುವ ಎಲ್ಲಾ ಆಕ್ಷೇಪಣೆಗಳನ್ನು ಪರಿಶೀಲಿಸಿ, ಸದರಿ ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ಎಲ್ಲಾ ಬದಲಾವಣೆಗಳನ್ನು ಮಹಾಯೋಜನೆಯಲ್ಲಿ ಸೇರಿಸಿದೆ ಎಂದು ವರದಿ ಮಾಡಿ, ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 10.03.2008ರ ಪತ್ರದಲ್ಲಿ ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಹಾಗೂ ಅಧ್ಯಕ್ಷರು, ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪಾಧಿಕಾರ, ಇವರು ಸರ್ಕಾರ ವಿವಿಧ ಪ್ರಾಧಿಕಾರಗಳಾದ BIAL, KIADB, KRDCL ಈ ಸಂಸ್ಥೆಗಳ ಬೇಡಿಕೆಗಳನ್ನು ಪರಿಶೀಲಿಸಿ ಆ ಪ್ರದೇಶಕ್ಕೆ ಬೇಕಾಗಿರುವ ಪ್ರಸ್ತಾವನೆಗಳನ್ನು ಮಹಾಯೋಜನೆಯಲ್ಲಿ ಅಳವಡಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ: 15/16–01–2009ರ ಪತ್ರದಲ್ಲಿ ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಹಾಗೂ ಅಧ್ಯಕ್ಷರು, ಬಿಐಎಪಿಎ, ಇವರು ಅಂತಿಮ ಮಹಾಯೋಜನೆಯಲ್ಲಿ ದಿನಾಂಕ: 17.09.2004ರ ಮುನ್ನ ಅನ್ಯಕ್ರಾಂತ ಆಗಿರುವ ಒಟ್ಟು 1565 ಹೆಕ್ಟೇರ್ (3867 ಎಕರೆ) ಪ್ರದೇಶವನ್ನು ನಕ್ಷೆಯಲ್ಲಿ ಗುರುತಿಸಿ, ಸದರಿ ಪ್ರದೇಶವನ್ನು ಸಂರಕ್ಷಿಸಲಾಗಿದೆಯೆಂದು ಹಾಗೂ KIADBಯ ಒಟ್ಟು 1706.84 ಹೆಕ್ಟೇರ್ (4217 ಎಕರೆ) ಪ್ರದೇಶವನ್ನು ಸೇರಿಸಿ ಒಟ್ಟು 14,627.63 ಹೆಕ್ಟೇರ್ ಪ್ರದೇಶಕ್ಕೆ ಮಹಾಯೋಜನೆಯನ್ನು ಸೀಮಿತಗೊಳಿಸಲಾಗಿದೆ ಎಂದು, ಜೊತೆಗೆ ಮಹಾಯೋಜನೆಯಲ್ಲಿ ಪ್ರಸ್ತಾವಿತ STRR, IRR, TRR, RR ಮತ್ತು Expressway ರಸ್ತೆಗಳನ್ನು ಸಹ ಅಳವಡಿಸಲಾಗಿದೆ ಎಂದು ವರದಿ ಮಾಡಿ BIAAPA ಮಹಾಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡಲು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರದ ಪತ್ರಗಳಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ಪ್ರಸ್ತಾಪಿತ ಮಹಾಯೋಜನೆಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಸರ್ಕಾರದಿಂದ ಸಲಹೆ / ಸೂಚನೆ ನೀಡಲಾಗಿರುತ್ತದೆ.

ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ನಿಯಮಿತ, ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರ, ಕೇಂದ್ರೀಯ ಆಂತರಿಕ ಭದ್ರತಾ ವ್ಯವಸ್ಥೆ, ಮುಂತಾದ ಸಂಸ್ಥೆಗಳ ಸಿಬ್ಬಂದಿ ಮತ್ತಿತರೆ ವಿಭಾಗಗಳಿಗೆ ವಸತಿ ಅವಶ್ಯಕತೆಗಳನ್ನು ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರದ ಸುರಕ್ಷಿತ ನಿಬಂಧನೆಗಳಿಗೆ ಒಳಪಡಿಸಿ ವಿಶೇಷ ವ್ಯವಸಾಯ ವಲಯದಲ್ಲಿ ಅಭಿವೃದ್ಧಿಗಾಗಿ ಅನುವು ಮಾಡಿಕೊಡಲಾಗಿದೆ. ಕೇಂದ್ರ ಸರ್ಕಾರ, ಕರ್ನಾಟಕ ಸರ್ಕಾರ ಹಾಗೂ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ನಿಯಮಿತ, ಇವುಗಳ ಮಧ್ಯೆ ನಡೆದಿರುವ ಒಪ್ಪಂದಗಳ ಪ್ರಕಾರ ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರದ ವಿಮೋಚನೆಗೊಳಪಡಿಸಿ ಸಾಮಾನ್ಯ ಸಾರಿಗೆ ವಲಯದಿಂದ ನಿಬಂಧನೆರಹಿತಗೊಳಿಸಲು ವಿಮಾನ ನಿಲ್ದಾಣ ಪ್ರದೇಶವನ್ನು ``ವಿಮಾನ ನಿಲ್ದಾಣ ವಲಯ`` ವೆಂದು ಘೋಷಿಸಲಾಗಿದೆ.

ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರನ್ವಯ ಮಹಾಯೋಜನೆಯನ್ನು ತಯಾರಿಸಿದ್ದು, ಅದರಂತೆ ಭೂ ಉಪಯೋಗ ವಲಯಗಳಲ್ಲಿ ವಿವಿಧ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸುವ ಸಂಬಂಧ, ಕಟ್ಟಡಗಳ ಸುತ್ತಮುತ್ತಲಿನ ನಡುಜಾಗಗಳು, ನಿವೇಶನ ಆವರಣ (Plot Coverage), ಅಂತಸ್ತಿನ ಅನುಪಾತ ಪ್ರದೇಶ (Floor Area Ratio), ಕಟ್ಟಡದ ಎತ್ತರ, ಕಟ್ಟಡ ರೇಖೆ (Building line), ವಾಹನ ನಿಲುಗಡೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ಒಳಗೊಂಡಿರುವ ನೂತನ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ.

ಮಹಾನಗರ ಆಯುಕ್ತರು, ಬಿಎಂಆರ್‌ಡಿಎ ಹಾಗೂ ಅಧ್ಯಕ್ಷರು, ಬಿಐಎಪಿಎ ಇವರು ಸಲ್ಲಿಸಿರುವ ಅಂತಿಮ ಮಹಾಯೋಜನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರಿ ಆದೇಶ ಸಂಖ್ಯೆ: ನಅಇ 157 ಬಿಎಂಆರ್ 2005**
**ಬೆಂಗಳೂರು. ದಿನಾಂಕ 27.01.2009**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ಬೆಂಗಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರಕ್ಕೆ ತಯಾರಿಸಿರುವ ಅಂತಿಮ ಮಹಾಯೋಜನೆ 2021ಕ್ಕೆ (ಮಾಸ್ಟರ್ ಪ್ಲ್ಯಾನ್) ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ 1961 ಸೆಕ್ಷನ್ 13(3)ರನ್ವಯ ಸರ್ಕಾರ ಮಂಜೂರಾತಿ ನೀಡಿದೆ ಹಾಗೂ ಉದ್ದೇಶಿತ ಮಹಾಯೋಜನೆಗೆ ಭೂ ಉಪಯೋಗದ ವಿಶ್ಲೇಷಣೆ ಈ ಕೆಳಕಂಡಂತೆ ಇರುತ್ತದೆ:–

| Description | Total Area Conurbation Area-2021 (Hectares) | % Total Proposed-2021 |
|---|---|---|
| Residential | 7,284.34 | 49.80% |
| Commercial | 470.33 | 3.23% |
| Industrial | 566.70 | 3.87% |
| Public & Semi Public | 731.94 | 5.00% |
| Park & Open Space | 1,841.89 | 12.59% |
| Airport Zone | 1,743.98 | 11.92% |
| Transportation | 1,982.61 | 13.55% |
| Public Utilities | 5.84 | 0.04% |
| Total Area Proposed | 14,627.63 | 100.0.0% |

| Description | Total Area Conurbation Area-2021 (Hectares) | % Total Proposed-2021 |
| --- | --- | --- |
| 1. KIADB Area | 1,706.84 | |
| 2. Special Agricultural Zone | 1,800.52 | |
| 3. Water bodies | 5,669.09 | |
| 4. Agriculture | 55,395.92 | |
| Grand Total Area | 79,200.00 | |

2021ರ ಮಾಸ್ಟರ್ ಪ್ಲ್ಯಾನ್‌ಗೆ ಸಂಬಂಧಿಸಿದ ವರದಿ ಹಾಗೂ ಭೂ ಉಪಯೋಗ ಯೋಜನೆಯ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆ ಹಾಗೂ ಸಹಿಯನ್ನು ಮಾಡಲಾಗಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು.**